# ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ವಜ್ರಮಹೋತ್ಸವ ಪ್ರತಿಷ್ಠಾನ.

* ಶ್ರೀ ಸಿದ್ಧಗಂಗಾ ಮಠ 600 ವರ್ಷಗಳ ಆಧ್ಯಾತ್ಮಿಕ ಪವಿತ್ರ ಪರಂಪರೆಯ ಇತಿಹಾಸ ಹೊಂದಿದೆ.
* ಇಲ್ಲಿಯ ತ್ರಿವಿಧ ದಾಸೋಹ ಮಹಾಕಾರ್ಯಗಳಾದ ಅನ್ನದಾನ, ವಿದ್ಯಾದಾನ ಧರ್ಮ-ಸಂಸ್ಕೃತಿ ಪ್ರಸಾರ ಜಗತ್ ಪ್ರಸಿದ್ಧವಾಗಿವೆ.
* ಶ್ರೀ ಮಠ ಜಾತ್ಯಾತೀತ ಸದ್ಭಾವನೆಯಿಂದ ದೀನ ದಲಿತರ ಉನ್ನತಿಗಾಗಿ ಶ್ರಮಿಸುತ್ತಿದೆ.
* ಎಲ್ಲಜಾತಿ, ವರ್ಗಕ್ಕೆ ಸೇರಿದ 5,000 ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದಾರೆ.
* ಲಕ್ಷೋಪಲಕ್ಷ ನಾಡಿನ ವಿದ್ಯಾರ್ಥಿಗಳು ಶ್ರೀ ಮಠದಲ್ಲಿ ಶಿಕ್ಷಣ ಪಡೆದು ರಾಜ್ಯದ ಎಲ್ಲೆಡೆ ಯೋಗ್ಯ ನಾಗರಿಕರಾಗಿ ಜೀವನ ಸಾಗಿಸುತ್ತಿದ್ದಾರೆ.

ನಾಡಿನ ಭಕ್ತಕೋಟಿ ಮತ್ತು ಹಳೆಯ ವಿದ್ಯಾರ್ಥಿಗಳು ಪೂಜ್ಯ ಶ್ರೀ ಶ್ರೀ ಗಳವರ ನಿಸ್ವಾರ್ಥ ಸಮಾಜ ಸೇವೆ, ಅಪೂರ್ವ ಜೀವನ ದರ್ಶನ ಮತ್ತು ಸಾಧನೆ ಗಳನ್ನು ಕೃತಜ್ಞತೆಯಿಂದ ಸ್ಮರಿಸಿ ಸನ್ಯಾಸ ಸ್ವೀಕಾರದ ವಜ್ರಮಹೋತ್ಸವ ಆಚರಿಸಲು ಯೋಜನೆಯನ್ನು ರೂಪಿಸಿದ್ದಾರೆ ಇದು ಶ್ರೀಮಠದ ಪ್ರಸ್ತುತ ಬೆಳವಣಿಗೆಯ ಅವಶ್ಯಕತೆಗೆ ಪೂರಕವಾಗಿದೆ.

## -: ಯೋಜನೆಯ ಪ್ರತಿಷ್ಠಾನಗಳು :-

**5 ಕೋಟಿರೂಗಳ ವೆಚ್ಚದಲ್ಲಿ**

**ಸುಂದರ ಆಧುನಿಕ ಬೃಹತ್ ವಿದ್ಯಾರ್ಥಿ ನಿಲಯ**

**ಏಕಕಾಲದಲ್ಲಿ 3,500 ಮಂದಿ ಊಟ ಮಾಡುವ ಬೃಹತ್ - ಪ್ರಸಾದ ನಿಲಯ**

ಎಲ್ಲರ ಕಲ್ಯಾಣವನ್ನು ಬಯಸುತ್ತಿರುವ ಶ್ರೀ ಮಠದ ಈ ಐತಿಹಾಸಿಕ ಭವ್ಯ ದಿವ್ಯ ಸ್ಮಾರಕಗಳ ನಿರ್ಮಾಣಕ್ಕೆ ಉದಾರವಾಗಿ ನಾಡಿನ ಜನತೆ ಕೂಪನ್ ಕೊಳ್ಳುವುದರ ಮೂಲಕ, ಚೆಕ್/ಡ್ರಾಫ್ಟ್ ಮೂಲಕ "ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ವಜ್ರಮಹೋತ್ಸವ ನಿಧಿ" ಹೆಸರಿನಲ್ಲಿ ನೆರವು ನೀಡ ಬೇಕಾಗಿ ಕೋರುತ್ತೇವೆ.

**ಪದ್ಮಭೂಷಣ ಡಾ|| ಎಂ.ಸಿ. ಮೋದಿ,** ಅಧ್ಯಕ್ಷರು

**ಬಿ.ಎಸ್. ಮುದ್ದಪ್ಪ, ಐ.ಎ.ಎಸ್.** ಕಾರ್ಯಾಧ್ಯಕ್ಷರು

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ವಜ್ರಮಹೋತ್ಸವ ಸಮಿತಿ,**
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572104.

# ಸಿದ್ಧಗಂಗಾ

ಸಂಪುಟ-30. ಸಂಚಿಕೆ 7 ಜುಲೈ—1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಗುರುವೆ ನೀತೋರಿದ ಹಾದಿಯಲಿ ನಡೆವುದೆ
ನಾಕೊಡುವ ಕಾಣಿಕೆ ತವಪದಕೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

'ನೀನೆ'ಂಬುದ ಕಲಿಸಿದೆ 'ನಾನೆಂಬುದ ಬಿಡಿಸಿದೆ
ನಾನೀನೆಂಬುದ ಸಂದು ಕಳಚಿದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ನಿರ್ಮಲಾಕಾಶವೆ ಅಲೆಯಿರದ ಸಾಗರವೆ
ನಿರುತ ನಿಗಿನಿಗಿಸಿರುವ ಶೀಲುರಿಯೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ.



# ಶ್ರೀವಾಣಿ

" ಧರಣಿಯ ಮೇಲೊಂದು ಸಿರಿದಪ್ಪ ಅಂಗಡಿ ಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ. ಒಮ್ಮ ನವಾದರೆ ಒಡನೆ ನುಡಿವನು. ಇಮ್ಮನವಾದರೆ ನುಡಿ ಯನು. ಕಾಣೆಯ ಸೋಲ. ಅರ್ಧಗಾಣಿಯಗೆಲ್ಲ ಬಲು ಜಾಣ ನಮ್ಮ ಕೂಡಲ ಸಂಗಮದೇವ''.

ಬಸವಣ್ಣನವರ ಈ ವಚನ ಅರ್ಥಪೂರ್ಣವಾಗಿದೆ. ಅದ್ಭುತವಾಗಿದೆ. ಭವ್ಯತೆಗೆ ಹಿಡಿದ ಕನ್ನಡಿಯಾಗಿದೆ. ಭಗವಂತನಾದ ಮಹದೇವಸೆಟ್ಟಿ ವ್ಯಾಪಾರಿಯಾಗಿದ್ದಾನೆ. ಅವನೊಂದು ಅಂಗಡಿ ಇಟ್ಟಿದ್ದಾನೆ. ಅಂತಿಂತಹ ಅಂಗಡಿಯಲ್ಲ. ಸಕಲ ಪದಾರ್ಥವನ್ನೊಳಗೊಂಡಿರುವ ಅಂಗಡಿ ಅಲ್ಲಿ ಸಿಕ್ಕದ ಸಾಮುಗ್ರಿಯೇ ಇಲ್ಲ. ಅಮೂಲ್ಯ ವಸ್ತುಗಳೆಲ್ಲಾ ಅಲ್ಲಿವೆ. ಜೀವಕೋಟಿಗೆ ಆಧಾರವಾದ ಸಮಸ್ತವೂ ಆ ಅಂಗಡಿಯಲ್ಲಿ ಲಭ್ಯ . ಆ ಅಂಗಡಿ ಮತ್ತೆಲ್ಲೂ ಕಣ್ಣಿಗೆ ಕಾಣದ ಸ್ಥಳದಲ್ಲಿಲ್ಲ. ಧರಣಿಯ ಮೇಲಿದೆ ಎಲ್ಲರಿಗೆ ಎಲ್ಲ ಕಾಲದಲ್ಲಿ ತೆರೆದೇ ಇದೆ. ಇಡೀ ಸೃಷ್ಟಿಯೇ ಆ ಅಂಗಡಿಯಾಗಿದೆ. ಅಲ್ಲಿರುವ ಪ್ರಕೃತಿ ಸಂಪತ್ತಿಗೆ ಕೊರತೆಯಿಲ್ಲ. ಖನಿಜ ಸಂಪತ್ತು ರಾಶಿ ರಾಶಿಯಾಗಿದೆ. ಆ ಅಕ್ಷಯ ಸಾಮುಗ್ರಿಯನ್ನು ಜೀವ ಜಾಲಕ್ಕಾಗಿ ಅದರಲ್ಲಿಯೂ ಮನುಷ್ಯನಿಗಾಗಿ ಮೀಸಲಿಟ್ಟಿದ್ದಾನೆ. ಕೊಳ್ಳುವವರಿಗೆ ಕೊಡಲು ಜಾಗೃತನಾಗಿ ಕುಳಿತ್ತಿದ್ದಾನೆ. ಕೊಳ್ಳುವವರು "ಒಮ್ಮನ"ದಿಂದ ಮುಂದೆ ಬಂದರೆ ಅವರೊಂದಿಗೆ ನುಡಿಯುತ್ತಾನೆ. ಶ್ರದ್ಧೆ, ಕಾಯಕ ಜೀವಿಯಾಗಿ ಪ್ರಕೃತಿಯ ಸೇವೆಯಲ್ಲಿ ನಿರತನಾದವನಿಗೆ ಮುಕ್ತನಾಗಿ ವಂಚನೆಯಿಲ್ಲದೆ ಶ್ರಮಕ್ಕೆ ತಕ್ಕ ಫಲ ನೀಡುತ್ತಾನೆ. ಸೋಮಾರಿಯಾದವನಿಗೆ " ಅರ್ಧಗಾಣಿ 'ಯನ್ನೂ ಕೊಡಲಾರ. ವ್ಯವಹಾರ ಕುಶಲಿಯಾದ ಮಹದೇವಸೆಟ್ಟಿ "ಬಲುಜಾಣ" ಪ್ರಕೃತಿಯಲ್ಲಿ ನಡೆದಿರುವ ಏರುಪೇರುಗಳು, ವಿಪತ್ತು ವಿಪ್ಲವಗಳು, ಭೀಕರ ದುರಂತಗಳು "ಇಮ್ಮನ" ವಾಗಿರುವುದರಿಂದಲೇ ಸಂಭವಿಸುತ್ತವೆ. ಪ್ರಕೃತಿಯೊಂದಿಗೆ ಮಾನವ ಪ್ರಕೃತಿಯೂ 'ಒಮ್ಮನ''ದೊಂದಿಗೆವ್ಯವಹರಿಸಬೇಕು. ಭಕ್ತಿ ಭಾವದಿಂದ ವಿಳಿತವಾಗಬೇಕು. ಒಂದು ಕಾಳು ಬಿತ್ತಿದರೂ ಹತ್ತುಕಾಳು ಪಡೆಯುವ ಭಾಗ್ಯವಂತರಾಗುವ ' ಒಮ್ಮನ''ದ ನಿಷ್ಠೆಬೇಕು. ಅಣ್ಣ ಬಸವಣ್ಣನವರ ಈ ವಚನ ತೆರೆಯುವ ಅಂಗಡಿಯ ದೃಶ್ಯ ಅನುಭಾವದ ಅಂಗಡಿಯಿಂದ ಮೂಡಿ ಬಂದ ಅರ್ಥದಿಗಂತಗಳನ್ನು ತೋರುವ ಪ್ರತಿಭಾ ಚಿತ್ರವಾಗಿದೆ.

(20-6-94 ರಂದು ಸಂಭಾಷಣೆಯಲ್ಲಿ ಮೂಡಿ ಬಂದ ಮಾತುಗಳಿಂದ ಸಂಗ್ರಹ)

## ಸಿದ್ಧಗಂಗಾ ಮಾಸ ಪತ್ರಿಕೆ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**" ಸಂಪಾದಕರು ",**
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.

**ಚಂದಾ ದರ**
ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಶ್ರೀ ಸಿದ್ಧಲಿಂಗೇಶ್ವರವಚನ



ಉಂಗುಷ್ಠದಲ್ಲಿ ಸರ್ಪದಷ್ಟವಾಗಲು
ಸರ್ವಾಂಗವೆಲ್ಲ ವಿಷಮುವಾಗಿಪ್ಪುದು ನೋಡಾ।
ಶರಣನೆಂಬಂಗದ ಮೇಲೆ ಲಿಂಗದಷ್ಟವಾಗಲು
ಆ ಶರಣನ ಸರ್ವಾಂಗವೆಲ್ಲವು ಲಿಂಗವಪ್ಪುದು ತಪ್ಪದು ನೋಡಾ।
ಲಿಂಗವನಪ್ಪಿ ಲಿಂಗಸಂಗಿಯಾದ ಅಭಂಗ ಶರಣಂಗೆ
ಅನಂಗ ಸಂಗವುಂಟೆ ? ಬಿಡಾ ಮರುಳೆ !
ಮಹಾ ಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !

ಯಾವನಾದರೊಬ್ಬ ಅಂಗುಷ್ಠವನ್ನು ಸರ್ಪವು ಕಚ್ಚಿದರೆ ಅವನ ಶರೀರವೆಲ್ಲ ವಿಷಮಯವೇ ಆಗುವಂತೆ ಶರಣ ಅಂಗದ ಮೇಲೆ ಧರಿಸಿದ ಲಿಂಗದಿಂದ ಅವನ ಸರ್ವಾಂಗವೆಲ್ಲ ಲಿಂಗಮಯವೇ ಆಗುವುದು. ಯಾವನು ಲಿಂಗವನ್ನಪ್ಪಿಕೊಂಡು ಲಿಂಗರೂಪನಾಗುವನೋ ಅವನಿಗೆ ಆನಂದ-ಕಾಮನ ಸಂಗವು ಎಂದಿಗೂ ಆಗಲಾರದು. ಲಿಂಗವನ್ನು ಪತಿ-ಯನ್ನಾಗಿ ಮಾಡಿಕೊಂಡವರಿಗೆ ಕಾಮನ ಕಾಟವು ಎಂದಿಗೂ ಆಗುವುದಿಲ್ಲ. ಕಾಮಾರಿಯಾದವನ ಸಂಗಮಾಡಿದವನನ್ನು ಕಾಮನು ಸ್ಪರ್ಶಿಸುವುದಾದರೂ ಹೇಗೆ ಸಾಧ್ಯವಾದೀತು !

[ಕೃಪೆ:- ಷಟ್‌ಸ್ಥಲಜ್ಞಾನಸಾರಾಮೃತ–ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ. ಎಡೆಯೂರು ಗದಗ.]

# ಸಂಪಾದಕೀಯ

ಸಿದ್ಧಲಿಂಗಸ್ವಾಮಿ-210ರೂ, ಚಂದ್ರಮೋಹನ್-189ರೂ, ಚಂದ್ರಶೇಖರ್ 94ರೂ, ರಾಮಚಂದ್ರ-194ರೂ, ರೇಣುಕೇಶ್-168ರೂ, ಗಂಗಾಧರ-67ರೂ, ಏನಿದು ಎನಿಸುತ್ತದೆಯಲ್ಲವೆ? ರಜಾ ಕಾಲದಲ್ಲಿ ಶ್ರೀ ಮಠದಲ್ಲಿಯೇ ಇದ್ದು ಕೆಲಸ ಕಾರ್ಯಗಳಲ್ಲಿ ದುಡಿದು ದೀನ ದಲಿತರ ವಿದ್ಯಾರ್ಥಿಗಳಿಗೆ ಪರಮ ಪೂಜ್ಯ ಶ್ರೀಗಳು ನೀಡುತ್ತಿರುವ ವೇತನ. ಶ್ರೀಮಠದಲ್ಲಿ ವ್ಯಾಸಂಗಕ್ಕಾಗಿ ಆಶ್ರಯ ಪಡೆದಿರುವ ಸುಮಾರು ಐದು ಸಾವಿರ ಮಕ್ಕಳಲ್ಲಿ ಅತ್ಯಂತ ಬಡಮಕ್ಕಳೇ ಹೆಚ್ಚು. ಅವರಲ್ಲಿ ತೀರಾ ಚೈತನ್ಯ-ವಿಲ್ಲದವರು ರಜಾದಿನಗಳಲ್ಲಿ ತಮ್ಮ ಊರುಗಳಿಗೆ ಹೋಗುವುದಿಲ್ಲ. ಕಾರಣ ಒಪ್ಪತ್ತಿನ ಊಟಕ್ಕೂ ಸ್ಥಿತಿಯಿಲ್ಲದವರಿದ್ದಾರೆ. ಅಂಥವರು ಮಠದಲ್ಲಿಯೇ ಉಳಿದು ಬಿಡುತ್ತಾರೆ. ಅವರ ಸಂಖ್ಯೆಯೇನೂ ಕಡಿಮೆಯದಲ್ಲ. ಸುಮಾರು ಒಂದು ಸಾವಿರವಾದರೂ ಇರುತ್ತದೆ. ಪ್ರಾಥಮಿಕ ಶಾಲೆಯಿಂದ ಮೊದಲ್ಗೊಂಡು ಪದವಿ ತರಗತಿಯವರಗೆ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿದ್ದಾರೆ ಅವರಿಗೆಲ್ಲ ಶ್ರೀಮಠವೇ ದಾರಿಯಾಗಿದೆ. ಮಕ್ಕಳು ಸೋಮಾರಿಗಳಾಗದಂತೆ ಒಂದಲ್ಲ ಒಂದು ಕೆಲಸದಲ್ಲಿ ನಿರತರಾಗಬೇಕಾಗುತ್ತದೆ. ಕೃಷಿ ಕೆಲಸದಲ್ಲಿ, ಕಟ್ಟಡ ನಿರ್ಮಾಣ ಕಾರ್ಯದಲ್ಲಿ, ನೈರ್ಮಲ್ಯ ಸೇವೆಯಲ್ಲಿ ತೊಡಗುತ್ತಾರೆ. ಅಂಥವರು ಒಟ್ಟು ಎಷ್ಟುದಿನ ಕೆಲಸಕ್ಕೆ ಹಾಜರಾದರು ಎಂಬ ಲೆಕ್ಕವಿಡಲಾಗುತ್ತದೆ. ಅವರು ಕೆಲಸದ ಮೇಲೆ ಇದ್ದ ದಿನಗಳನ್ನು ಗಣನೆಗೆ ತೆಗೆದುಕೊಂಡು ವೇತನವನ್ನು ಕೊಡಲಾಗುತ್ತದೆ. ಶೈಕ್ಷಣಿಕ ವರ್ಷಾರಂಭದಲ್ಲಿ ಕೊಡುವ ಈ ಹಣ ಆ ವಿದ್ಯಾರ್ಥಿಗಳ ಶಾಲಾ ಕಾಲೇಜುಗಳ ಶುಲ್ಕ ಹಾಗೂ ಇನ್ನಿತರ ಸಣ್ಣ ಪುಟ್ಟ ಖರ್ಚುವೆಚ್ಚಗಳಿಗೆ ಸಾಕಾಗುತ್ತದೆ. ಇದಲ್ಲದೆ ಅಂಥ ವಿದ್ಯಾರ್ಥಿಗಳಿಗೆ ಉಚಿತವಾಗಿ ಬಟ್ಟೆಗಳನ್ನು ಕೊಡುವ ವ್ಯವಸ್ಥೆಯಿದೆ ಮತ್ತು ಇದೆಲ್ಲಕ್ಕೆ ಮಿಗಿಲಾಗಿ ಪ್ರತಿಭಾವಂತರಾಗಿ ಮುಂದೆ ಬರುವ ಸೂಚನೆಗಳುಳ್ಳ ಬಡ ವಿದ್ಯಾರ್ಥಿಗಳಿಗೆ ಯಾವುದೇ ಶುಲ್ಕವಿಲ್ಲದೆ ಇಂಜಿನಿಯರಿಂಗ್ ಕಾಲೇಜಿನಲ್ಲಿ, ಬಿ ಎಡ್. ಕಾಲೇಜಿನಲ್ಲಿ ಪ್ರವೇಶಾವಕಾಶ ದೊರೆಯುತ್ತದೆ. ಶ್ರೀಮಠಕ್ಕೆ ಪ್ರಾಥಮಿಕ ವಿದ್ಯಾಭ್ಯಾಸಕ್ಕೆಂದು ಬಂದ ವಿದ್ಯಾರ್ಥಿಗಳ ನೇಕರು ತಮ್ಮ ವ್ಯಾಸಂಗಾನಂತರ ಶ್ರೀ ಮಠದ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಸಿಬ್ಬಂದಿ ವರ್ಗದವರಾಗಿ ಜೀವನೋಪಾಯ ಮಾರ್ಗವನ್ನು ಕಂಡುಕೊಂಡಿರುವ ಭಾಗ್ಯವಂತರಾಗಿದ್ದಾರೆ. ಅನೇಕರು ಈಗಾಗಲೇ ನಿವೃತ್ತರೂ ಆಗಿದ್ದಾರೆ. ಜೀವನದ ಎಳೆಯ ವಸ್ಸಿನಲ್ಲಿಯೇ ಸಂಸ್ಕಾರವನ್ನು ಪಡೆದುಕೊಂಡು ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಪರಮ ಪೂಜ್ಯರಿನ್ನೂ ತಮ್ಮ ಸೇವಾಮಣಿಹದಿಂದ ನಿವೃತ್ತರಾಗಿಲ್ಲ; ನಿವೃತ್ತರಾಗುವ ಪ್ರವೃತ್ತಿಯು ಪೂಜ್ಯಪಾದರಲ್ಲಿ ಕಾಣುತ್ತಿಲ್ಲ. "ಶಿವಯೋಗಿಯ ಶರೀರ ವೃಥಾ ಸವೆಯಲಾಗದು" – ಎಂಬ ಸಿದ್ಧರಾಮ ಶಿವಯೋಗಿಯ ಸೂಕ್ತಿಗೆ ಜೀವಂತ ಭಾಷ್ಯವಾಗಿದ್ದಾರೆ. "ಮಕ್ಕಳು ಪ್ರಸಾದ ಸ್ವೀಕರಿಸಿ ಬರುವುದನ್ನು ನೋಡುವುದೇ ದೊಡ್ಡ ಆನಂದ" - ಎನ್ನುತ್ತಾರೆ.

## ಪ್ರಿಯ ಓದುಗರಲ್ಲಿ ವಿನಂತಿ.

* "ಸಿದ್ಧಗಂಗಾ" ಆದರಾಭಿಮಾನಗಳನ್ನು ಹೊಂದಿ ಸಾಮಾನ್ಯ ಓದುಗರು ಆಜೀವ/ಶಾಶ್ವತ ಸದಸ್ಯರಾಗಲು ಉತ್ಸಾಹ ತೋರುತ್ತಿರುವುದು ಸಂತೋಷ ವನ್ನುಂಟು ಮಾಡಿದೆ.
* ಪತ್ರಿಕೆಗಳು ಪ್ರತಿ ಮಾಹೆ ಅನೇಕ ಆಜೀವ ಸದಸ್ಯರುಗಳಿಗೆ ತಲುಪದೆ ನಮ್ಮ ಕಾರ್ಯಾಲಯಕ್ಕೆ ಹಿಂದಿರುಗುತ್ತಿವೆ.
* ನಿಮ್ಮ ಆಜೀವ ಸದಸ್ಯತ್ವದ ಸಂಖ್ಯೆ L.......... .....ಗುರುತಿಸಿಕೊಳ್ಳಿ, ಈ ಸಂಖ್ಯೆಯು ನಿಮ್ಮ ವಿಳಾಸದ ಹಿಂಬದಿ ಇರುತ್ತದೆ
* ವಿಳಾಸ ಬದಲಾವಣೆಯಾದ ಕೂಡಲೆ ತಪ್ಪದೆ ಆಜೀವ ಸದಸ್ಯತ್ವದ ಸಂಖ್ಯೆ L ................ಸೂಚಿಸಿ ಹೊಸ ವಿಳಾಸವನ್ನು ಪತ್ರ ಮುಖೇನ ಈ ಕೆಳಗಿನ ವಿಳಾಸಕ್ಕೆ ತಿಳಿಸಿ. 'ಸಿದ್ಧಗಂಗಾ' ತಪ್ಪದೆ ಕೈಸೇರುವಂತೆ ಮಾಡಿಕೊಳ್ಳಿ
* ಸಕಾಲದಲ್ಲಿ ವ್ಯವಹರಿಸಿ ನಮ್ಮೊಡನೆ ಸಹಕರಿಸಿರಿ.

ಪ್ರಕಾಶಕರು,
**ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,**
**ತುಮಕೂರು-572104.**

---

## ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು–19

ಒಂದು ಮನವಿ:-

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನವು ಬೆಳ್ಳೂರಿನಲ್ಲಿ ಸಿದ್ಧವಾಗಿರುವ ಬಿ ಎಂ. ಶ್ರೀ ಭವನದಲ್ಲಿ ಬಿ ಎಂ. ಶ್ರೀ ಗ್ರಂಥಾಲಯವನ್ನು, ಬಿ. ಎಂ. ಶ್ರೀ ಜೀವನ, ಸಾಧನೆ ಕುರಿತು ವಸ್ತುಸಂಗ್ರಹಾಲಯವನ್ನು ಒಳಗೊಂಡ ಬಿ. ಎಂ. ಶ್ರೀ ಅಧ್ಯಯನ ಕೇಂದ್ರವನ್ನು ತೆರೆಯಲು ಸಿದ್ಧತೆಗಳನ್ನು ನಡೆಸಲಾಗುತ್ತಿದೆ. ಸದ್ಯದಲ್ಲೇ ಮುಖ್ಯಮಂತ್ರಿಗಳಿಂದ ಬಿ. ಎಂ. ಶ್ರೀ ಭವನವನ್ನು ಉದ್ಘಾಟನೆ ಮಾಡಿಸಲಾಗುವುದು.

ಲೇಖಕರು, ಪ್ರಕಾಶಕರು, ಸಂಘ ಸಂಸ್ಥೆಗಳು, ಅಭಿಮಾನಿಗಳು, ಸಾರ್ವಜನಿಕರು ತಮ್ಮಲ್ಲಿರ ಬಹುದಾದ ಹೆಚ್ಚಿನ ಪುಸ್ತಕಗಳನ್ನು ಮತ್ತು ಬಿ ಎಂ. ಶ್ರೀ ಅವರು ಬರೆದಿರುವ ಪತ್ರ, ಬಳಸುತ್ತಿದ್ದ ಅಥವ ಸಹಿ ಇರುವ ಪುಸ್ತಕ ವಸ್ತು-ಗಳನ್ನು ದಯವಿಟ್ಟು ಬಿ.ಎಂ. ಶ್ರೀ ಪ್ರತಿಷ್ಠಾನ 54, ಎಂ.ವಿ ಸೀತಾರಾಮಯ್ಯ ರಸ್ತೆ, ವಾಸ್ತಿನಗರ (ಗವಿಪುರದ ವಿಸ್ತರಣ), ಬೆಂಗಳೂರು-560 019. (ದೂರವಾಣಿ: 608374) ಈ ವಿಳಾಸಕ್ಕೆ ಕಳುಹಿಸಿ ಕೊಡಬೇಕಾಗಿ ಕೋರಿದೆ.

ಎಸ್. ಬಸವಾರಾಧ್ಯ, ಅಧ್ಯಕ್ಷರು, ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ.

# ಬಸವ ತತ್ತ್ವ ರತ್ನಾಕರ-25
## (ವಚನ ಕಾವ್ಯ ಸುಧಾಸಾಗರ)

ೀ ಸೋಟಗಿ ಮಲ್ಲಿಕಾರ್ಜುನ, "ಕನ್ನಡ ಕವಿ ಕಾಳಿದಾಸ" ಅಥಣಿ-4, ಬೆಳಗಾವಿ ಜಿಲ್ಲೆ.

### ಭಕ್ತಿಯ ಬೆಳೆ (232)

"ಶಿರ ಇಲ್ಲದ ಚರಣ ನಡೆಯ ಬಲ್ಲುದೆ ?
ಕುಕ್ಷಿಯಿಲ್ಲದಿರೆ ಬಾಯಿ ಸವಿಯ ಬಲ್ಲುದೆ ?
ಆತ್ಮವಿಲ್ಲದಿರೆ ಈ ಕರ ಚರಣಾದಿಗಳಿಗೆ ಏತರ ಹೊಲುಬು ಹೇಳಯ್ಯಾ ?
ನಿನ್ನ ಭಕ್ತಿಯ ಬೆಳೆ ಎನಗೆ ಸತ್ಪಥ ಕಂಡಯ್ಯಾ !
ಇದುವೆ ನಿಶ್ಚಯ ಕಾಣಾ! ಶ್ರೀಶೈಲ ಮಲ್ಲಿಕಾರ್ಜುನ! "

### ಅನುಭವಾಮೃತ (233)

"ಜ್ಞಾನಿ ತಾನಾದ ಬಳಿಕ ಅನ್ಯರ ಸ್ತುತಿಗೆ ಒಳಗಾಗಬಾರದಯ್ಯಾ !
ಜ್ಞಾನಿ ತಾನಾದ ಬಳಿಕ ಅನ್ಯರ ನಿಂದೆಗೆ ಒಳಗಾಗಬಾರದಯ್ಯಾ !
ಜ್ಞಾನಿ ತಾನಾದ ಬಳಿಕ ಅನ್ಯ ಸ್ತ್ರೀಯರಿಗೆ ಅಳುಕಬಾರದಯ್ಯಾ !
ಜ್ಞಾನಿ ತಾನಾದ ಅನ್ಯರ ಧನವ ಅಪೇಕ್ಷಿಸ ಬಾರದಯ್ಯಾ!

ಜ್ಞಾನಿ ತಾನಾದ ಬಳಿಕ ಸತ್ಯನುಡಿಯ ಉಪೇಕ್ಷಿಸಬಾರದಯ್ಯಾ
ಜ್ಞಾನಿ ತಾನಾದ ಬಳಿಕ ಅಸತ್ಯ ನುಡಿಯ ಆಡಬಾರದಯ್ಯಾ !
ಜ್ಞಾನಿ ತಾನಾದ ಬಳಿಕ ಲಿಂಗಾಚಾರವ ಬಿಡಬಾರದಯ್ಯಾ !
ಜ್ಞಾನಿ ತಾನಾದ ಬಳಿಕ ಅವಧೂತ ಮಾರ್ಗವ ಹಿಡಿಯಬಾರದಯ್ಯಾ !

ಜ್ಞಾನಿ ತಾನಾದ ಬಳಿಕ ಶರಣರ ಸಂಗವ ತೊರೆಯಬಾರದಯ್ಯಾ !
ಜ್ಞಾನಿ ತಾನಾದ ಬಳಿಕ ಸೃಷ್ಟಿಯ ಉಪೇಕ್ಷಿಸಬಾರದಯ್ಯಾ !
ಜ್ಞಾನಿ ತಾನಾದ ಬಳಿಕ ಸಕಲ ವಿಶ್ವ ಪ್ರಪಂಚವನೆಲ್ಲವೂ ಅಯ್ಯಾ !
ಜ್ಞಾನ ಭರಿತ ತನ್ನ ಸ್ವರೂಪವೆಂಬ ಸಮರಸ ಭಾವವ ಬಿಡಬಾರದಯ್ಯಾ !
ಇದುವೆ ಸುಜ್ಞಾನ ಸದ್ಬೋಧೆ: ವೃಷ್ಟಿಧಾರಾ ಸುಧೆ !
ಕೇಳಾ ! ಮಹಂತ ಮಹಿಮ ಶ್ರೀಶೈಲ ಮಲ್ಲಿಕಾರ್ಜುನ!"

### ಭಕ್ತಿಯ ಉತ್ಪತ್ತಿ (234)

"ತಾಯಿಯ ಹೆರಿಗೆಯ ಮುನ್ನವೇ ಆಕೆಯ ಸ್ತನಗಳಿಗೆ ಹಾಲು ಸುರಿಸುವಂತೆ,
ದೇವರು ಬರುವ ಮೊದಲು, ಭಕ್ತನ ಹೃದಯಕ್ಕೆ ಭಕ್ತಿಯನ್ನು ಕಳಿಸುವನು !

ಆ ಮೇಲೆ ಭಗವಂತನು ಭಕ್ತನ ಹೃನ್ಮಂದಿರಕ್ಕೆ ಬರುವನು !
ಕೇಳಾ! ನಮ್ಮ ಭಕ್ತಿಪ್ರಿಯ ಶ್ರೀಶೈಲ ಮಲ್ಲಿಕಾರ್ಜುನ ಮಹಾಲಿಂಗಯ್ಯನು

## ವಿಶಾಲದೃಷ್ಟಿಬೇಕು (235)

"ಜಗತ್ತಿನಲ್ಲಿ ಅದೆಷ್ಟೊ ತಿಳಿದ ಹಿರಿಯ ವ್ಯಕ್ತಿಗಳು ಇರುವರೆನಿತೊ
ಆದಡೆ ನಾವು ಅವರನ್ನು ನಿರ್ಮಲ ಭಾವದಿಂದ
ಕಂಡು ಕೊಳ್ಳುವ ತುಂಬು ದೃಷ್ಟಿಯನ್ನು ಪಡೆದಿಲ್ಲ ನೋಡಾ !
ಬಲ್ಲಿದ ಹಿರಿಯ ಮಹನೀಯರೆಂದಡೆ,
ಇಂದಿನಾ ಡಾಕ್ಟರೇಟ್ ಪದವಿ ಪಡೆದವರೂ ಅಲ್ಲ.
ಜ್ಞಾನ ಪೀಠ ಪ್ರಶಸ್ತಿ ಪಡೆದವರೂ ಅಲ್ಲ.
ಶಿವ ಭಕ್ತಿ-ಜ್ಞಾನಾನುಭವಗಳ ತ್ರಿವೇಣೀ ಸಂಗಮವಾಗಿಪ್ಪ
ಮಹಾನು ಭಾವಿಗಳೆ ಹಿರಿಯ ವ್ಯಕ್ತಿಗಳೆಂಬುದು
ತ್ರಿಕಾಲ ಸತ್ಯ ಸಿದ್ಧಾಂತ ಕಾಣಾ !
ಶ್ರೀ ಶೈಲ ಮಲ್ಲಿಕಾರ್ಜುನ !"

## ದೇವರು ಇದ್ದಾನೆ (236)

"ಆಕಾಶದಲ್ಲಿ ರಾತ್ರಿ ಕಾಣುವ ನಕ್ಷತ್ರಗಳು
ಸೂರ್ಯೋದಯವಾದೊಡನೆ ತೋರದಿರುವಾಗ,
ಆ ನಕ್ಷತ್ರಗಳೇ ಇಲ್ಲವೆನ್ನಬಹುದೆ ?
ಹಾಗೆಯೆ ಮಾನವನಲ್ಲಿ ಅಜ್ಞಾನವು ಆವರಿಸಿಕೊಂಡಿರುವವರೆಗೆ
ಅವನಿಗೆ ದೇವರು ಕಾಣದಿರುವಾಗ,
ಆ ದೇವರೇ ಇಲ್ಲವೆನ್ನಬಹುದೆ? ನೀನೆ ಹೇಳಾ!
ಶ್ರೀ ಶೈಲ ಮಲ್ಲಿಕಾರ್ಜುನ!"

## ಗ್ರಹಬಲಾದಿಗಳ ನಂಬಲಾಗದು: (237)

"ಶಿವನ ತಂತ್ರದಿಂದ ಸುಖ-ದುಃಖಂಗಳು ಬರುತಿಹವು ಕಂಡಯ್ಯಾ-
ಭಕ್ತರಾದವರು ಸೂರ್ಯಬಲ, ಚಂದ್ರಬಲ, ತಾರಾಬಲ,
ಗುರುಬಲವೆಂದು ನವಗ್ರಹ ಬಲವ ಕೇಳಲಾಗದು ನೋಡಯ್ಯಾ.
ಸೂರ್ಯಜ್ಞಾನವುಳ್ಳವನಾದೊಡೆ, ಗೌತಮ ಮಹಾಮುನಿಯ-
ಸತಿ ಅಹಲ್ಯಾದೇವಿಗೆ ಮೋಹಿಸಿ, ಮುನಿಯ ಶಾಪಕ್ಕೊಳಗಾಗಿ
ಕುಷ್ಟದೊಳಗಿರುತಿರ್ದನೇನಯ್ಯಾ ?

ಚಂದ್ರ ಜ್ಞಾನವುಳ್ಳವನಾದಡೆ ಗುರುಪತ್ನಿಯ ಬಯಸಿ
ಕೊಂಡೊಯ್ದು ಕಲಂಕಿತನಾಗುತಿರ್ದನೇನಯ್ಯಾ ?
ಬೃಹಸ್ಪತಿ ಜ್ಞಾನವುಳ್ಳವನಾದಡೆ, ತನ್ನ ಹೆಂಡತಿ ರೋಹಿಣಿದೇವಿಯ
ಚಂದ್ರನೆತ್ತಿಕೊಂಡು ಹೋಗುವಾಗ ಸುಮ್ಮನಿರುತಿರ್ದನೇನಯ್ಯಾ ?
ಶನಿ ಜ್ಞಾನವುಳ್ಳವನಾದಡೆ, ಕುಂಟನಾಗಿ ಬಳಲುತ್ತ
ಸಂಕೋಲೆಗೊಳಗಾಗುತಿರ್ದನೇನಯ್ಯಾ ?
ಅದು ಕಾರಣ ತಮಗೆ ಒದಗಿ ಬರುತಿಪ್ಪ ಸುಖ-ದುಃಖಂಗಳನು
ತಾವೆ ಮೊದಲು ಅರಿಯರಾಗಿ,
ಇನ್ನು ಪರರ ಸುಖ-ದುಃಖಂಗಳನೆಂತರಿವರಯ್ಯಾ ?
ನೀನೆ ಹೇಳಾ, ಮಹಂತ ಮಹಿಮ ಶ್ರೀ ಶೈಲ ಮಲ್ಲಿಕಾರ್ಜುನ ! "

### ಬಸವೇಶ್ವರನೆ ಸಕಲದೈವ (238)

"ದೇವಲೋಕದವರಿಗೂ ಬಸವಣ್ಣನೆ ದೈವನೋಡಾ !
ಮರ್ತ್ಯಲೋಕದವರಿಗೂ ಬಸವಣ್ಣನೆ ದೈವ ನೋಡಾ!
ನಾಗಲೋಕದವರಿಗೂ ಬಸವಣ್ಣನೆ ದೈವ ನೋಡಾ!
ಶ್ರೀ ಶೈಲ ಮಲ್ಲಿಕಾರ್ಜುನ ತಂದೆಯೆ ನಿಮಗೂ
ಎನಗೂ ನಿಮ್ಮ ಶರಣರಿಗೂ ಬಸವಣ್ಣನೆ ದೈವ ನೋಡಾ

### (239) ಶರಣರು ಮೆಟ್ಟಿದ ಧರೆ ಪಾವನ

"ಅಯ್ಯಾ ನಿಮ್ಮ ಪ್ರಮಥರು ಮೆಟ್ಟಿದ ಭೂಮಿ ಪಾವನವಯ್ಯಾ.
ಅಯ್ಯಾ ನಿಮ್ಮ ಪ್ರಮಥರಿರ್ದಪುರವೆ ಕೈಲಾಸಪುರವಯ್ಯಾ.
ಅಯ್ಯಾ ನಿಮ್ಮ ಪ್ರಮಥರು ನಿಂದುದೆ ನಿಜ ನಿವಾಸವಯ್ಯಾ.
ಶ್ರೀ ಶೈಲ ಮಲ್ಲಿಕಾರ್ಜುನಯ್ಯಾ, ನಿಮ್ಮ ಪ್ರಮಥಪುಂಗವ
ಸಂಗನ ಶ್ರೀ ಬಸವರಾಜದೇವನಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಗಿರ್ದು
ಆ ಬಸವರಾಜದೇವರ ಶ್ರೀ ಪಾದಕ್ಕೆ ಆನು ನಮೋನಮೋ ಎನುತಿರ್ದೆನು!"

### (240) "ಆದ್ಯರ ವಚನ ಪರುಷಕಂಡಯ್ಯ"

"ನಮ್ಮ ಪುರಾತನರ ವಚನಂಗಳೆಲ್ಲ ಕಾಮಧೇನು
ಕಲ್ಪವೃಕ್ಷಗಳು ಕಂಡಯ್ಯಾ.
ನಮ್ಮ ಆದ್ಯರ ವಚನಂಗಳೆಲ್ಲ ಪರುಷ-ಚಿಂತಾಮಣಿಗಳು ಕಂಡಯ್ಯಾ.
ನಮ್ಮ ಪುರಾತನರ ವಚನಂಗಳೆಲ್ಲ ನವರತ್ನಂಗಳು ಕಂಡಯ್ಯಾ.

ನಮ್ಮ ಆದ್ಯರ ವಚನಂಗಳೆಲ್ಲ ಕಾವ್ಯಸಂಪತ್ತಿಗೆ
ಮಾತೃಸ್ಥಾನ ಸ್ಫೂರ್ತಿಯ ಸೆಲೆ ಕಂಡಯ್ಯಾ.
ನಮ್ಮ ಪುರಾತನರ ವಚನಂಗಳೆಲ್ಲ ಸಕಲ ಸಾಹಿತ್ಯ ಕೃತಿ ಶಿಶುಗಳ್ಗೆ
ತಾಯಿ-ತಂದೆಗಳು ಕಂಡಯ್ಯಾ.
ನಮ್ಮ ಆದ್ಯರ ವಚನಂಗಳೆಲ್ಲ ಭವತಾರಿಣಿ ಕಂಡಯ್ಯಾ.

ನಮ್ಮ ಪುರಾತನರ ವಚನಂಗಳೆಲ್ಲ ಅಮೃತಸಾಗರ ಕಂಡಯ್ಯಾ.
ನಮ್ಮ ಆದ್ಯರ ವಚನಂಗಳೆಲ್ಲ ಅನುಭಾವದ ಅಣಿಮುತ್ತುಗಳು ಕಂಡಯ್ಯಾ.
ನಮ್ಮ ಪುರಾತನರ ವಚನಂಗಳೆಲ್ಲ ವಿಶ್ವಧರ್ಮ ತತ್ವರತ್ನಂಗಳು ಕಂಡಯ್ಯಾ.
ನಮ್ಮ ಆದ್ಯರ ವಚನಂಗಳಿಗೆ ಮಿಗಿಲಪ್ಪ-ಸಾಹಿತ್ಯ ಗೀತ-ಕಾವ್ಯ-ಧರ್ಮ
ತತ್ವಂಗಳು ಮೂಲೋಕದೊಳಗಿಲ್ಲ ಕಂಡಯ್ಯಾ.
ನಮ್ಮ ಪುರಾತನರ ವಚನಂಗಳಲ್ಲಿ ಭಕ್ತಿಗಂಗೆ ತುಂಬಿ ಹರಿಯುತ್ತಿಹಳು ಕಂಡಯ್ಯಾ.
ನಮ್ಮ ಆದ್ಯರ ವಚನಂಗಳಲ್ಲಿ ಜ್ಞಾನಗಂಗೆ ತುಂಬಿ ಪ್ರವಹಿಸಿದ್ದಳು ಕಂಡಯ್ಯಾ.
ನಮ್ಮ ಪುರಾತನರ ವಚನಂಗಳಲ್ಲಿ ವೈರಾಗ್ಯಗಂಗೆ
ತುಂಬಿ ಹರಿಯುತ್ತಿಹಳು ಕಂಡಯ್ಯಾ.
ನಮ್ಮ ಶಿವಶರಣರ ವಚನಂಗಳಲ್ಲಿ ಸ್ತ್ರೀಪುರುಷ ಭೇದರಹಿತ ಆತ್ಮ ಸ್ವಾತಂತ್ರ್ಯ-
-ವುಂಟು ನೋಡಾ !
ನಮ್ಮ ಶ್ರೀ ಬಸವಾದಿ ಶರಣರ ಕಾಯಕ ತತ್ವವನರಿದೊಡಾಚರಿಸಿ ನಡೆದೊಡೆ
-ಎಂದಿಗೂ
ಜಗಕೆ ಬಡತನ ವೆಂಬುದೇ ಇಲ್ಲ ಕಂಡಯ್ಯಾ. "ಅರಿದೊಡೆ ಶರಣ-
ಮರೆದೊಡೆ ಮಾನವ" !
ಗುರು-ಲಿಂಗ-ಜಂಗಮವಾದಡುಂ ಕಾಯಕದಿಂದಲೇ ಜೀವಿಸಬೇಕಯ್ಯಾ.
ಕಾಯಕವಿಲ್ಲದೇ ಉಂಬುವ ವ್ಯಕ್ತಿ ಭೂಮಿಗೆ ಭಾರ ಕಂಡಯ್ಯಾ.
ನಮ್ಮ ಆದ್ಯರ ವಚನಂಗಳಲ್ಲಿ ಷಟ್‌ಸ್ಥಲ ಶಿವಾಚಾರ ಗಂಗೆ ತುಂಬಿ ಹರಿ-
-ಯುತ್ತಿಹಳು ನೋಡಾ !
ನಮ್ಮ ಪುರಾತನರ ವಚನ ವಾಙ್ಮಯದಲ್ಲಿ ನೂರೊಂದು ಸ್ಥಲ ಮೀರಿ ಮಹದಲ್ಲಿಪ್ಪ
ಪರಾತ್‌ಪರ ಮುಕ್ತಿಸೌಭಾಗ್ಯಗಂಗೆ ತುಂಬಿ ಹರಿಯುತ್ತಿಹಳು ನೋಡಾ !
ಇಂತಹ ಮಹಾನುಭಾವಿ ಆದ್ಯರ ವಚನ ಭಂಡಾರವ ಶ್ರೀ ಬಸವೇಶ್ವರದೇವರು
ಮುಖ್ಯವಾಗಿ
ಪ್ರಭುದೇವರನೊಳಗೊಂಡ ಏಳು ನೂರೆಪ್ಪತ್ತು ಅಮರ ಗಣಂಗಳು,
ಅಸಂಖ್ಯಾತ ಪುರಾತನರು, ಪ್ರಮಥಗಣಂಗಳು ಕೇಳಿ ಹೇಳಿ
ಕೊಂಡಾಡಿದ ಕಾರಣ, ನಮ್ಮ ಶ್ರೀ ಶೈಲಮಲ್ಲಿಕಾರ್ಜುನನಲ್ಲಿ

ಸರ್ವಸುಖವ ಸೂರೆಗೊಂಡು ಸ್ವಯಲಿಂಗವಾದರು!"

241) ನಾಲ್ಕು ಯುಗದ ನಾಲ್ಕು ಲಿಂಗಸ್ಥಲ

"ಕೃತ ಯುಗದಲ್ಲಿ ಪ್ರಥಮ ಮೂಲಸ್ಥಾನ-ಕೇದಾರೇಶ್ವರ.
ತ್ರೇತಾ ಯುಗದಲ್ಲಿ ಪ್ರಥಮ ಮೂಲಸ್ಥಾನ-ರಾಮೇಶ್ವರ.
ದ್ವಾಪರ ಯುಗದಲ್ಲಿ ಪ್ರಥಮ ಮೂಲಸ್ಥಾನ–ಸೌರಾಷ್ಟ್ರ.
ಕಲಿಯುಗದಲ್ಲಿ ಪ್ರಥಮ ಮೂಲಸ್ಥಾನ-ಶ್ರೀಶೈಲ.
ಇಂತೀ ನಾಲ್ಕು ಯುಗಂಗಳಿಗೆ
ನಾಲ್ಕು ಲಿಂಗಸ್ಥಲಂಗಳಿವು.
ಕಾಣಾ! ಶ್ರೀಶೈಲ ಮಲ್ಲಿಕಾರ್ಜುನ!"

242) ಬಸವಣ್ಣನಿಂದ ಲಿಂಗೋತ್ಪತ್ತಿ

"ಆದಿ ಲಿಂಗ ಅನಾದಿ ಬಸವಣ್ಣನಾದ ಕಾರಣ
ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು ನೋಡಾ!
ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು ನೋಡಾ!
ಪ್ರಸಾದವು ಬಸವಣ್ಣನು ಅನುಕರಿಸಲು ಆಯಿತ್ತು
ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣ
ಕಾಣಾ! ಶ್ರೀಶೈಲ ಮಲ್ಲಿಕಾರ್ಜುನ!"

(243) ಶ್ರೀ ಮಹಾಗುರುವಾದ ಬಸವೇಶ್ವರ.

"ಪ್ರಾಣಲಿಂಗದ ಪೂರ್ವಾಶ್ರಯವ ಕಳೆಯಲೆಂದು
ಲಿಂಗ ಪ್ರಾಣಿಯಾದನಯ್ಯಾ ಬಸವಣ್ಣ.
ಲಾಂಛನದ ಪೂರ್ವಾಶ್ರಯವ ಕಳೆಯಲೆಂದು
ಜಂಗಮ ಪ್ರಾಣಿಯಾದನಯ್ಯಾ ಬಸವಣ್ಣ.
ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು
ಮಹಾ ಪ್ರಸಾದಿಯಾದನಯ್ಯಾ ಬಸವಣ್ಣ.
ಇಂತೀ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು
ಮಹಾಗುರುವಾದನಯ್ಯಾ ಬಸವಣ್ಣ.
ಇಂತು ನಮ್ಮ ಅನಾದಿ ಬಸವಣ್ಣನೆ ಸಕಲ ಕಳಾ-.
ಮೂರ್ತಿಯಾಗಿ ಲೋಕಾದಿ ಲೋಕಂಗಳಲ್ಲಿ ಬೆಳಗುತ್ತಲಿರ್ದನಾಗಿ,

ಇಂತಪ್ಪ ನಮ್ಮ ಬಸವಣ್ಣನಿಂದ ಮೂಜಗವೆಲ್ಲ ಬದುಕಿತ್ತು
ಕಾಣಾ! ಶ್ರೀಶೈಲ ಮಲ್ಲಿಕಾರ್ಜುನ!"

(244) **ಬಸವಣ್ಣನೆ ಧರ್ಮಸಿಂಧು.**

"ಬಸವಣ್ಣನೆ ಎನ್ನತಾಯಿ, ಬಸವಣ್ಣನೆ ಎನ್ನತಂದೆ,
ಬಸವಣ್ಣನೆ ಸರಳ ಶರಣ ಬಂಧು, ಬಸವಣ್ಣನೆ ವಿಶ್ವಧರ್ಮಸಿಂಧು.
ಬಸವಣ್ಣನೆ ಸರ್ವ ದೈವ, ಬಸವಣ್ಣನೆ ಜಗಜ್ಯೋತಿ, ಬಸವಣ್ಣನೆ ಕಾಯಕ ತತ್ವ
ರೂವಾರಿ,
ಬಸವಣ್ಣನೆ ಚತುರ್ದಶ ಭುವನಂಗಳಿಗೆ ಮೇಣ್ ಬ್ರಹಾಂಡಕೆಲ್ಲಕೂ ಆಧಾರ
ಬಸವಣ್ಣನೆ ಗುರು–ಲಿಂಗ–ಜಂಗಮ ಪ್ರಭೆ-ವೆಂದು
ಅಸಮ ಭಕ್ತಿಯೊಳಾನು ಪೂಜಿಸಿ
ಬಸವಲಿಂಗದೊಳೊಡದೆರೆದೆ ಕಾಣಾ!
ಶ್ರೀಶೈಲಮಲ್ಲಿಕಾರ್ಜುನ!"

(ಮುಂದುವರಿಯುವುದು)

# ವಚನಸಾಹಿತ್ಯ ಮತ್ತು ಜನಪದ ಸಾಹಿತ್ಯ

ಶಶಿಕಾಂತ ರುದ್ರಪ್ಪ, ಉಪನ್ಯಾಸಕರು, ಕೆ.ಎಲ್.ಇ. ಫಾರ್ಮಸಿ ಕಾಲೇಜು, ಬೆಳಗಾವಿ-10

ವಚನಸಾಹಿತ್ಯ ಮತ್ತು ಜನಪದ ಸಾಹಿತ್ಯವು ಕನ್ನಡ ಸಾಹಿತ್ಯದ ರೂಪರೇಷ್ಟಿ ಸತ್ವವುಳ್ಳ ಆಸ್ತಿಯೆಂದೆನ್ನಬಹುದು ಯಾವ ಪೂರ್ವ ತಯಾರಿಲ್ಲದೆ, ಸಹಜ ಪ್ರಾಸ, ಮಣ್ಣಿನ ವಾಸನೆ, ಅಸ್ತಿತ್ವವಾದಿ ಪ್ರಜ್ಞೆಯೊಂದಿಗೆ ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯದಲ್ಲಿ ನಿಲ್ಲುವಂತೆ ಮಾಡಿವೆ.

ಜನಪದ ಸಾಹಿತ್ಯವು ಜನಾಂಗೀಯ ಭಾಷೆಯಾಗಿ, ಸಂಜ್ಞೆ, ವಾದ್ಯ, ಕುಣಿತ, ಸಂಗೀತಗಳ ಮುಖಾಂತರ ನಾಡು ನುಡಿಯ ಸಂಸ್ಕೃತಿ ಪರಂಪರೆಯನ್ನು ಶತಮಾನ-ದಿಂದಲೂ ತೋರಿಸುತ್ತಲೇ ಬಂದಿವೆ "ಕನ್ನಡ ಸಾಹಿತಿಯಾಗಬಯಸುವವನಿಗೆ ವಚನ ಸಾಹಿತ್ಯ ಮತ್ತು ಜನಪದ ಸಾಹಿತ್ಯದ ಅಧ್ಯಯನವೊಂದಿದ್ದರೆ ಸಾಕು" ಎಂದೆನ್ನುವ ಡಾ|| ಯು. ಆರ್. ಅನಂತಮೂರ್ತಿಯವರ ಅಭಿಪ್ರಾಯ ಇಲ್ಲಿ ಅತ್ಯಂತ ಸಮಂಜಸ ವೆನಿಸುತ್ತದೆ ಕನ್ನಡ ಸಾಹಿತ್ಯವು ಚಂಪು, ರಗಳೆ, ವಚನ, ಷಟ್ಪದಿ, ಸಾಂಗತ್ಯ ಹೀಗೆ ಹಲವಾರು ಹೊಸ ಹೊಸ ಪ್ರಯೋಗಗಳನ್ನು ಕಂಡಿತು. ಇವುಗಳಲ್ಲಿ ಜಾನಪದ ಗಟ್ಟಿತನದ ನೆಲೆಯಿಂದ ನಿಲ್ಲಬಲ್ಲ ಪ್ರಯೋಗವೆಂದರೆ ವಚನಸಾಹಿತ್ಯ. ವಚನಸಾಹಿತ್ಯ ಮತ್ತು ಜನಪದ ಸಾಹಿತ್ಯವು ಸಮಷ್ಟಿಯ ಸಾಹಿತ್ಯ. ಯಾವುದೇ ಒಬ್ಬ ವ್ಯಕ್ತಿಯ ಸಾಧನೆಯಿಂದ ಹೊರ ಹೊಮ್ಮಿದ ಕಲಾ ಕೌಶಲ್ಯವಲ್ಲ. ಸಮಷ್ಟಿಯ ಸಮಗ್ರ ಜನಾಂಗದ ಅನುಭವಗಳನ್ನು ಪ್ರತಿನಿಧಿಸುವ ಜನಪದ ಕವಿ ಮತ್ತು ವಚನಕಾರರು ತಮ್ಮ ತ್ರಿಪದಿ ಮತ್ತು ವಚನಗಳ ರೂಪದಲ್ಲಿ ಬದುಕನ್ನು ವಿಮರ್ಶಿಸಿದ್ದಾರೆ. ಇವರು ಪಾಂಡಿತ್ಯ ಪ್ರದರ್ಶನ ಮತ್ತು ಬಹುಮಾನಕ್ಕೆ ಅಳರಸರ ಸಂತೋಷಕ್ಕೆ ತಮ್ಮ ವಚನ ತ್ರಿಪದಿಗಳನ್ನು ರಚಿಸಲಿಲ್ಲ.

ಜನಪದ ಸಾಹಿತ್ಯದಲ್ಲಿ ಹಳ್ಳಿಯ ಜನತೆ ತಮ್ಮ ಯಾವುದೇ ಕ್ರಿಯೆಗಳ ಪೂರ್ವದಲ್ಲಿ ಮತ್ತು ಸಭೆ ಸಮಾರಂಭ, ಹಬ್ಬ ಹರಿದಿನಗಳ ಮುಕ್ತಾಯದ ಹಂತದಲ್ಲಿ ತಮ್ಮ ಆಧ್ಯಾತ್ಮಿಕ ದೇವತೆಯನ್ನು ನೆನೆಯುವುದು ವಾಡಿಕೆ. ಹೊಲದಲ್ಲಿ ಬಿತ್ತುವಾಗ, ರಾಶಿ ಎತ್ತುವಾಗ, ಮದುವೆಯ ಕಾರ್ಯದಲ್ಲಿ, ಶ್ರೀಮಂತ ಕಾರಣ (ಗರ್ಭಿಣಿಗೆ ಉಡಿ ತುಂಬುವ ಕಾರ್ಯ) ಹೀಗೆ ಪ್ರತಿ ಕಾರ್ಯದಲ್ಲಿ ಜನಪದ ಕವಿಗಳು, ಕನ್ನಡದ ಗರತಿಯರು ಕಲ್ಯಾಣದ ಶರಣರನ್ನು ನೆನೆದಿದ್ದಾರೆ. ಭಾರತದ ಭವ್ಯ ಪರಂಪರೆಯಲ್ಲಿ, ಕರ್ನಾಟಕ ಸಂಸ್ಕೃತಿಯಲ್ಲಿ ಕಂಡು ಬರುವ ಅದೆಷ್ಟೋ ಆಚಾರ್ಯರನ್ನಾಗಲಿ ಸಾಧು-ಸಂತ. ಧರ್ಮ ಸಂಸ್ಥಾಪಕರನ್ನಾಗಲಿ ನೆನೆಯಲಿಲ್ಲ. ಯಾರು ಜನಪದಕ್ಕೆ ಸಮೀಪದಲ್ಲಿದ್ದರೋ, ಅಥವಾ ಯಾರು ಜನಪದವನ್ನು ಅಪ್ಪಿಕೊಂಡರೋ, ಅವರನ್ನು ಜನಪದವು ಅಪ್ಪಿಕೊಂಡಿತು. ವೀರರಾಣಿ ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ

ಸಿಂಧೂರ ಲಕ್ಷ್ಮಣ ನಂತಹ ವೀರಮಣಿಗಳ ಸ್ತುತಿ ಜನಪದ ಸಾಹಿತ್ಯದಲ್ಲಿ ಸಾಮಾಕರಣ ಸಮಯದಲ್ಲಿ ಕಾಣಬಹುದಾಗಿದೆ ಮಕ್ಕಳನ್ನು ಆಡಿಸಲು ಪದ, ಬೀಸುಕಲ್ಲಿನ ಪದ, ಸುಗ್ಗಿ ಪದ, ಹಂತಿಪದ, ಲಾವಣಿಪದ, ಗೀಗಿಪದ ಹೀಗೆ ಹಲವಾರು ವಿವಿಧ ಪ್ರಯೋಗ-ಗಳು ಕೃಷಿ-ಕಾಯಕವನ್ನು ಎತ್ತಿ ತೋರಿವೆ.

ಜನಪದ ಸಾಹಿತ್ಯದಲ್ಲಿ ಶರಣರ ಬಗ್ಗೆ ದೊರೆಯುವಷ್ಟು ತ್ರಿಪದಿಗಳು ಇನ್ನಾವ ಮಹಾತ್ಮರ ಬಗ್ಗೆ ದೊರೆಯುವುದಿಲ್ಲ.

"ಶರಣರ ನೆನೆದರ ಸರಗೀಯ ಇಟ್ಟಾಂಗ
ಕಲ್ಹೂಡಿ ನೆನೆದೆನೋ ಕಲ್ಯಾಣದಯ್ಯನ
ಕಲ್ಯಾಣ ಪಟ್ಟಣಕ್ಹೋಗಿ, ಎಲ್ಲ ದೇವರ ಕಂಡೆ
ಬಲ್ಲಿದನ ಕಂಡು ಬಸವಣ್ಣ!"

ಎಂದೆನ್ನುವಲ್ಲಿ ಜನಪದ ಕವಿಗಳಿಗೆ ಮಹಾನ್ ದಾರ್ಶನಿಕ, ತತ್ವಜ್ಞಾನಿ ಬಸವಣ್ಣನೇ ದೈವಸ್ವರೂಪನಾಗಿದ್ದನು. ಆತನ ಶರಣ ನುಡಿಗಳೇ ಜನಪದ ಸಮೂಹಕ್ಕೆ ವೇದ ವಾಕ್ಯಗಳಾಗಿದ್ದವು. ಜನಪದವು ಮಹಾಮಾನವತಾವಾದಿ ಬಸವಣ್ಣ, ಮೋದಾರ ಕೇತಯ್ಯ, ಮಡಿವಾಳ ಮಾಚಯ್ಯ, ಅಕ್ಕಮಹಾದೇವಿ, ಹೂಗಾರ ಮಾದಣ್ಣ ಹೀಗೆ ಹಲವಾರು ಶರಣರನ್ನು ವಿವಿಧ ಸಂದರ್ಭದಲ್ಲಿ ನೆನೆದಿದ್ದಾರೆ. ಅದೇ ರೀತಿಯಲ್ಲಿ ವಚನಕಾರರು ಸಹಜ ಪ್ರಸಾದ ನುಡಿಗಳನ್ನು ಆಯ್ದುಕೊಂಡು ಜನಪದ ಕವಿಗಳಂತೆ ಪದಪ್ರಯೋಗ ಮಾಡಿದ್ದಾರೆ.

"ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ
ಸುತ್ತು ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ"

ಎನ್ನುವ ವಚನದಲ್ಲಿ ಸತ್ವಯುತ ನೈಜಲಯದಲ್ಲಿ ತಮ್ಮ ಅಂತರಾಳದ ಅನುಭವ ಚಿಂತನೆಯನ್ನು ನಿವೇದಿಸಿಕೊಂಡಿದ್ದಾರೆ

ಜನಪದ ಕವಿಗಳು ನಿತ್ಯ ಬದುಕಿನ ಸೌಂದರ್ಯವನ್ನು, ನೋವು-ಸಂತೋಷವನ್ನು ತಮ್ಮ ಇತರ ಸಹೃದಯಿಗಳೊಂದಿಗೆ ಹಂಚಿಕೊಳ್ಳಲು ಸಂಗೀತ, ವಾದ್ಯ, ನೃತ್ಯ, ಬಯಲಾಟ, ಕುಣಿತದ ಮುಖಾಂತರ ತಮ್ಮ ಕಾವ್ಯಶಕ್ತಿಯನ್ನು ಹೊರ ಹೊಮ್ಮಿಸು-ತ್ತಾರೆ, ಆನಂದಿಸುತ್ತಾರೆ. ಜನಪದ ಸಾಹಿತ್ಯವು ಪಂಡಿತ ಪಾಮರರಿಂದ ಹುಟ್ಟಿದ್ದಲ್ಲಾ ಕನ್ನಡ ನಾಡಿನ ಯಾವುದೋ ಮೂಲೆಯಲ್ಲಿ ಬೀಸುವ ಗ್ರಾಮೀಣ ಗರತಿ ಗಂಗವ್ವ ನಿಂದ, ಬಂದ ರಾಶಿಯ ತೂರಿ ಸುಗ್ಗಿ ಮಾಡುವ ಬಂಟ ರೈತನಿಂದ ಸರಾಗವಾಗಿ, ಜನಾಂಗದಿಂದ ಜನಾಂಗಕ್ಕೆ ಕಲುಷಿತಗೊಳ್ಳದೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಇಂದು ಕಾವ್ಯಕ್ರಿಯೆ, ನೈಜ ಕಾವ್ಯ ಶಕ್ತಿ ಹಳ್ಳಿಗಳಲ್ಲಿ ಕಾಣಬಹುದಲ್ಲದೆ, ಪಟ್ಟಣಗಳ ಕಾಂಕ್ರೀಟ್ ಕಾಡಿನಲ್ಲಲ್ಲ.

ಇದನ್ನರಿತೇ ಶರಣರು ವಚನವೆಂಬ ಗದ್ಯ-ಪದ್ಯ ಸಮಿಶ್ರೀತ ಹೊಸಶೈಲಿ ಆಯಾಮ, ಕಾವ್ಯ ಪದ್ಧತಿಯನ್ನು ಕಂಡುಕೊಂಡರು. ಕನ್ನಡ ಕಾವ್ಯ ಪರಂಪರೆಯಲ್ಲಿ ವಚನ ಸಾಹಿತ್ಯವು ಒಂದು ಸುವರ್ಣ ಯುಗಧರ್ಮವನ್ನು ನಿರ್ಮಿಸಿತು. ಚಪ್ಪಲಿ ಹೊಲೆಯುವ ಹರಳಯ್ಯನು ಬ್ರಾಹ್ಮಣ ಕುಲದ ಮಧುವರಸನೊಂದಿಗೆ ಸಮಾನ ವೇದಿಕೆಯಲ್ಲಿ ಕುಳಿತು ವೈಚಾರಿಕ, ದಾರ್ಶನಿಕ, ತಾತ್ವಿಕ ಚಿಂತನೆ ಮಾಡಿದ್ದಲ್ಲದೆ, ಅಗ್ರಜ-ಅಂತ್ಯಜರ ಮಧ್ಯ ರಕ್ತ ಸಂಬಂಧವನ್ನು ಕಲ್ಪಿಸಿ ಜಾಗತಿಕ ಇತಿಹಾಸದಲ್ಲೆ ಅಚ್ಚಳಿಯದ ಅಪೂರ್ವ ಕ್ರಾಂತಿಯಗೈದು ಮಾನವೀಯ ಉಚ್ಚ ಸಂಸ್ಕೃತಿ, ಪರಂಪರೆಯನ್ನು ಪ್ರದರ್ಶಿಸಿದ್ದಾರೆ. ವಚನಕಾರರು "ಜನವಾಣಿಯನ್ನೆ ದೇವವಾಣಿಯನ್ನಾಗಿ ಪರಿವರ್ತಿಸಿದರು" ಕನ್ನಡ ಕಾವ್ಯ ಪರಂಪರಯಲ್ಲಿ.

ಸಂಸ್ಕೃತ ಭೂಯಿಷ್ಟ ಮಾರ್ಗ ಪದ್ಧತಿಯನ್ನು ಕಿತ್ತೆಸೆದು ಅಚ್ಚ ಕನ್ನಡದಲ್ಲಿ ತಾವು ಕಂಡ ಜೀವನ ವಿಮರ್ಶೆ, ಸತ್ಯ, ಅನುಭವವನ್ನು ನಿರ್ಭಡೆಯಿಂದ ಬರೆದ. ಶರಣರು, ವಚನಕಾರರು "ಅಚ್ಚ ಕನ್ನಡದ ಬೇಸಾಯಗಾರರಾದರು. ವಚನಕಾರರಲ್ಲಿ ಕಾಣಿಸುವಷ್ಟು ವಸ್ತು ನಿಷ್ಠೆ, ಸಮಾನಸ್ಕಂದಮನಸ್ಸಿನ ಸಿದ್ಧಾಂತವನ್ನು ಜಗತ್ತಿನ ಇತರ ಕವಿಗಳಲ್ಲಿ ಕಾಣುವುದು ಕಡಿಮೆ. ಜನಪದ ಸಾಹಿತ್ಯವು ವಚನ ಸಾಹಿತ್ಯದ ಉಗಮಕ್ಕೆ ಮೂಲ ಪ್ರೇರಣೆಯಾದರೆ, ವಚನ ಸಾಹಿತ್ಯ ಬದುಕಿನ ಎಲ್ಲ ಕ್ಷೇತ್ರವನ್ನು ತಾನು ಕಂಡುಂಡು ಸತ್ಯವನ್ನು ಪರಾಮರ್ಶಿಸಿ ಜನಸಾಮಾನ್ಯರಿಗೆ ನಿಲುಕಿ ಬದುಕಿನ ಉನ್ನತ ಮೌಲ್ಯಗಳನ್ನು ಅರಿಯಲು ಸಹಾಯಕವಾದವು. ಈ ಶರಣರ ಚಳುವಳಿಯಲ್ಲಿ ಅಂಬಿಗರು, ಮಡಿವಾಳರು, ಮೇದಾರರು, ಮಾದರು, ಸಮಗಾರರು ಹೀಗೆ ಸಮಾಜದಲ್ಲಿ ತುಳಿಯಲ್ಪಟ್ಟವರ ವೀರಘೋಷಣೆಯಾಗಿ ವಚನವು ಹೊರಹೊಮ್ಮಿತು. ಆತ್ಮ ವಿಮರ್ಶೆ, ಸ್ವಯಂ ಸಂಶೋಧನೆಗಾಗಿ ಶರಣರು ವಚನಗಳ ಮುಖಾಂತರ ತಮ್ಮ ಧಾರ್ಮಿಕ ಆಂತರಿಕ ಶುದ್ಧಿಗಾಗಿ ಸಾಧನೆಗೈದರು. ಅವರ ಅನುಭವವೇ ಕಾವ್ಯದ ವಸ್ತು

ಜನಪದ ಸಾಹಿತ್ಯವು ಹಾಸ್ಯ, ಲೇವಡಿ, ಸಂತೋಷ, ಸಮಾಧಾನ, ವೀರ-ಗಾಥೆಯನ್ನು ಹೊಂದಿದ್ದು ಹೊಲದಲ್ಲಿ ದುಡಿಯುವ ರೈತ ಪಕ್ಷಿಗಳನ್ನು ತಮ್ಮ ಬಾಳಿನಲ್ಲಿಯ ಪರಿಹಾಸ್ಯಕ್ಕೆ ಹೋಲಿಸಿದ್ದಾನೆ.

"ಕಾಗವ್ವ ಬಸರಾಗಿ, ಗುಬ್ಬೆವ್ವ ಹಲಿವುಳಿದು
ಟೀಟಿ ಟಮ್ಮವ್ವ ಹೊಳಿಮೆಟ್ಟ ! ಓಡಾಡಿ
ಬುರ್ಲೆವ್ವ ನೀರ ಹೊರತಾಳ"

ವಯಸ್ಸನ್ನು ಮೀರಿದ ಹಲವಾರು ವ್ಯಕ್ತಿಗಳ ಮನೋಲಾಸೆಗಳನ್ನು ಕಂಡ ಜಾನಪದ ಕವಿ.

"ಮುದುಕ ಮುದುಕಿಯು ಕೂಡಿ ಮುದಕವಿ ಸಂತೆಗೋಗಿ
ಮುದುಕಿ ಬೇಡಾಳೋ ಕುಲಾಯಿ ! ಆ ಮುದುಕ
ಕಟಬಗರಿ ಕಂಡು ಅಳತಾನೋ

ಅದೇ ರೀತಿ ಮದುವೆ ಸಂದರ್ಭದಲ್ಲಿ ಬೀಗರನ್ನು ಲೇವಡಿ ಮಾಡುತ್ತಾ.

"ಆನೆ ಬರತಾವಂತ ಆರು ಬಣವಿಯ ಕೊಂಡೆ
ಆನೆಲ್ಲಿ ನಿಮ್ಮ ದಳವೆಲ್ಲಿ॥ ಓ ಬೀಗಾ
ಬೋಳ್ಹೋರಿ ಮ್ಯಾಲ ಬರತಾರ

ಇಂಥಹ ಹಲವಾರು ಲಘು ಹಾಸ್ಯವನ್ನು, ಒಗಟುಗಳನ್ನು ವಚನಕಾರರು ಬಳಸಿದ್ದಾರೆ.

ಜನಪದ ಸಾಹಿತ್ಯ ಮತ್ತು ವಚನ ಸಾಹಿತ್ಯದ ಕಸುವಿನಿಂದ ಬೆಳೆದಿದ್ದ ಹಲವಾರು ಕವಿಗಳಲ್ಲಿ ವಿಶಿಷ್ಟವಾಗಿ ನಿಲ್ಲುವ ಮಹಾಮೂರ್ತಿಗಳೆಂದರೆ ಸರ್ವಜ್ಞ ಮತ್ತು ಶಿಶುನಾಳ ಶರೀಫರು ಸರ್ವಜ್ಞನು ವಚನ ಮತ್ತು ಜನಪದ ಸಾಹಿತ್ಯಗಳ ಸಮನ್ವಯ ಕವಿಯಾಗಿ ನಿಲ್ಲುತ್ತಾನೆ. ಇವನ ತ್ರಿಪದಿಗಳಲ್ಲಿ ಜನಪದದ ದಾಟಿ ಇದ್ದರೆ, ವಚನಗಳ ಅನುಭವವನ್ನು ಕಾಣಬಹುದು.

"ಆಡು ಮುಟ್ಟದ ಸೊಪ್ಪಿಲ್ಲ ಸರ್ವಜ್ಞ ಬರೆಯದ ವಿಷಯವಿಲ್ಲ" ಎಂಬ ಮಾತಿನಂತೆ, ಸರ್ವಜ್ಞ ಜನಪದ, ವಚನಗಳ ಭೂತಳವಲ್ಲಿ ಹೊಕ್ಕು ವಿವೇಕಿ, ಪರಾಕ್ರಮಿಯಾಗಿ ಬದುಕನ್ನು ಅತೀ ಸಮೀಪದಿಂದ ಕಂಡ ಸಮದರ್ಶಿ, ಖಂಡಿತತ್ವವಾದಿ, ನಿಷ್ಠುರ ಪ್ರೇಮಿ, ಆರೋಗ್ಯ, ಜಾತಿ, ನಾಡು, ವೃತ್ತಿ, ಮೌಲ್ಯ ಗಳಲ್ಲದೆ ಅನಿಷ್ಟಗಳಾದ ಹಾದರ, ಕಳುವುಗಳ ಬಗ್ಗೆ ಜನಪದದ ಶೈಲಿಯಲ್ಲಿ ಟೀಕಿಸಿದ್ದಾನೆ.

ಕೈಕಾಲು ಮುರಿದರೂ ಹೆಡಮುರಿದು ಕಟ್ಟಿದರೂ,
ನಡ ಮುರಿ ಹೊಡೆದರೂ ॥ ಕೊನೆಗೆ
ಹಾದರವ ಬೀಡನೆಂದ ಸರ್ವಜ್ಞ ॥

ಇದನ್ನು ಜನಪದವು ''ಸೂಳೀಗೆ ಹೋಗಾವ್ನ, ಸುಲಿದು ಮಟ್ಟಿಕಟ್ಟಿ
ಊರ ಹೊರಗವನ ಹೆಡಮುರಗಿ। ಕಟ್ಟಿದರ
ಸೂಳೆಂಬ ಸಬುದ ಬಿಡಲಿಲ್ಲೊ ॥

ದಾಸೋಹದ ಬಗ್ಗೆ ಸರ್ವಜ್ಞನು ''ಅನ್ನದಾನಕ್ಕಿಂತ ಮುನ್ನದಾನಗಳಿಲ್ಲ" ಮತ್ತು "ಕಾಗೆ–ಕೋಳಿಗಳಿಗಿಂತ ಕರಕಷ್ಟ" ಎಂಬ ನುಡಿಗಳನ್ನು ಬಹುಶಃ ವಚನ ಸಾಹಿತ್ಯದ ಪ್ರೇರಣೆಯಿಂದಲೆ ಬಳಸಿರಬಹುದು. ಸರ್ವಜ್ಞನಿಗೆ ಬಸವಣ್ಣನೆ ಆರಾಧ ದೈವ, ಪರಮಗುರು.

"ಹಸಿದೊಡಂಬಲಿ ಮುದ್ದು, ಬಿಸಲಿಗೆ ಕೊಡೆ ಮುದ್ದು
ಬಸುರಿಗೆ ಶಿಶುಮುದ್ದು । ಲೋಕಕ್ಕೆ
ಬಸವಣ್ಣನೇ ಮುದ್ದು ಸರ್ವಜ್ಞ''

ಶರಣರಂತೆ ವಸ್ತುನಿಷ್ಠನಾದ ಸರ್ವಜ್ಞ, ಜನಪದಕವಿಗಳಂತೆ ಹಾಸ್ಯ ಪ್ರಿಯ. ಲೇವಡಿಗಾರ, ವಿಮರ್ಶಕ, ನಿಸರ್ಗ ಪ್ರೇಮಿಯೆಂದು ಆತನ ತ್ರಿಪದಿಗಳಿಂದ ತಿಳಿದು ಬರುತ್ತದೆ.

ಶಿಶುನಾಳ ಶರೀಫರು ಅಚ್ಚು ಹಾಕಿದ ಜಾನಪದದ ಶೈಲಿಯಲ್ಲಿ ಹಾಡಿದ್ದಾರೆ. ತಮ್ಮ ತತ್ವದ ಪದಗಳಲ್ಲಿ ಸುಖ, ನೆಮ್ಮದಿ, ಸಂತೋಷ, ಭರವಸೆ ಮೂಡಿಸುವ ಮಹಾ ಮೋಡಿಗಾರ ಶಿಶುನಾಳ ಶರೀಫರು. ಬಾಲ್ಯದಲ್ಲಿ ಇವರು ‘ಪ್ರಭುಲಿಂಗ ಲೀಲೆ’ಯಿಂದ ಪ್ರೇರಿತರಾಗಿ ಶರಣರ ವಚನಗಳನ್ನು ಓದಿದರೆ, ಜಾನಪದದ ಮೂಲ ...ಂದ ಬಂದಿದ್ದ ಶರೀಫರು ಅದರ ಗಟ್ಟಿತನವನ್ನು ಸಾಮಾಜಿಕ, ಧಾರ್ಮಿಕ ...ಡಂಬನೆಗಾಗಿ ಬಳಸಿದ್ದಾರೆ. ಇವರು ಆಲಾವಿ, ಕರ್ಬಲಗಳ ಜಾನಪದ ಗೀತೆಗಳನ್ನು ...ರಣ ಮಾಡಿದರು, ಅವರ ಪ್ರತಿಮೆಗಳನ್ನು ತಮ್ಮ ಧಾರ್ಮಿಕ ಚಿಂತನೆಯಲ್ಲಿ ...ಳಸಿದರು. ಶರೀಫರು “ಅಜ್ಞಾನವನ್ನು ಸೋರುತ್ತಿರುವ ಮನೆ ಮಾಳಿಗೆಗೆ ...ೋಲಿಸಿದ್ದಾರೆ. ಶರೀಫರು “ಬಸವೇಶನನ್ನು ದೆಸೆ ದೆಸೆಗೆ ನೆನೆದಿದ್ದಾರೆ” “ಎಡೆಯ ...ಯ್ಯನು ಬಾರೆ ಒಡೆಯ ಅಲ್ಲಮನಿಗೆ” ಎಂದು ಹೇಳಿ ಪ್ರಭು ದೇವನನ್ನು ...ೊಂಡಾಡಿದ್ದಾರೆ. ಇದೇ ರೀತಿಯಲ್ಲಿ ಮುಪ್ಪಿನ ಷಡಕ್ಷರಿ, ಕುಂಬಾರ ಗುಂಡಯ್ಯ, ...ವಿಲುಗುಂದದ ನಾಗಲಿಂಗಯ್ಯತಿಗಳು, ಮುಂತಾದ ಕವಿಗಳು ಜನಪದ ಮತ್ತು ...ಚನ ಸಾಹಿತ್ಯದಿಂದ ಪ್ರೇರಿತರಾಗಿ ಬಂದವರು. ಇಂದು ಕನ್ನಡಕಾವ್ಯ ಪರಂಪರೆಯು ...ಡ್ಡುಗಟ್ಟಿ ಸಾವನಪ್ಪುವ ಸ್ಥಿತಿಯಲ್ಲಿ ಮತ್ತೇ ಜೀವ ಕಳೆ ತುಂಬ ಬಲ್ಲವು ವಚನ ...ುತ್ತು ಜನಪದ ಸಾಹಿತ್ಯಗಳು. ●

# ಅಹಿಂಸೆಯ ಸಾಕಾರ ಮೂರ್ತಿ

# ಭಗವಾನ್ ಬುದ್ಧ

—ಮಹಾಂತೇಶ ಮಲ್ಲನಗೌಡರ್, ಇಂಗ್ಲೀಷ್ ಉಪನ್ಯಾಸಕರು, ಬಾಲಕರ ಸರಕಾರಿ ಪಧವಿಪೂರ್ವ ಕಾಲೇಜು ಕೊಪ್ಪಳ. ರಾಯಚೂರು ಜಿಲ್ಲೆ.

ಅಹಿಂಸೆಯ ಸಾಕಾರ ಮೂರ್ತಿಯಾದ ಬುದ್ಧನು ಜನ್ಮವೆತ್ತಿದುದು ವೈಶಾಖ ಶುದ್ಧ ಪೂರ್ಣಿಮೆಯಂದು ಬೋಧಿಯೆಂಬ ಜ್ಞಾನಲಾಭವನ್ನು ಪಡೆದಿದ್ದನ್ನು ವೈಶಾಖ ಶುದ್ಧ ಪೂರ್ಣಿಮೆಯಂದು ಪರಿನಿರ್ವಾಣೆಯನ್ನು ಪಡೆದಿದ್ದದು ವೈಶಾಖಶುದ್ಧ ಪೂರ್ಣಿಮೆಯಂದು. ವೈಶಾಖ ಪೂರ್ಣಿಮೆಯಂದು ವಿಶ್ವದಾದ್ಯಂತ ಬುದ್ಧ ಜಯಂತಿಯನ್ನು ಆಚರಿಸುವುದುಂಟು. ಆತನ ಜೀವನವೇ ಒಂದು ದಿವ್ಯವಾದ ಭವ್ಯವಾದ ಬೋಧನೆ. ಗೌತಮ ಬದ್ಧನು ಹುಟ್ಟಿದ್ದು ಶಾಕ್ಯರ ಗಣರಾಜ್ಯವಾದ ಕಪಿಲವಸ್ತುವಿನಲ್ಲಿ. ಆತನ ತಂದೆ ಶುದ್ಧೋದನ ಹಾಗೂ ತಾಯಿ ಮಹಾಮಾಯಾ ದೇವಿ ಈರಾಜ ದಂಪತಿಗಳು ತಮಗೆ ಬಹುಕಾಲ ಮಕ್ಕಳಿಲ್ಲದಿರಲು ವ್ರತ ನಿಯಮಗಳನ್ನು ಪಾಲಿಸಿದರು. ಒಂದು ದಿನ ಆಕೆ ವಿಚಿತ್ರವಾದ ಕನಸೊಂದನ್ನು ಕಂಡಳು. ಕನಸಿನ ಮಹಿಮೆಯನ್ನು ದೈವಜ್ಞರು ವಿವರಿಸಿ ಸತ್ಪುತ್ರ ಲಾಭ ಸೂಚನೆ ಎಂದು ಹೇಳಿದರು. ಅವಳು ಹೆರಿಗೆಗಾಗಿ ತನ್ನ ತವರುಮನೆಗೆ ಪ್ರಯಾಣ ಮಾಡುತ್ತಿದ್ದಾಗ ದಾರಿಯಲ್ಲಿಯೇ ಪ್ರಸವದ ಚಿಹ್ನೆಗಳು ಕಾಣಿಸಿಕೊಂಡವು. ಸಮೀಪದಲ್ಲಿದ್ದ ಲುಂಬಿನವನದ ಎರಡು ಸಾಲುಮರಗಳ ನೆರಳಿನಲ್ಲಿ ಮುಂದೆ ಬುದ್ಧನಾಗುವ ಮಗುವಿಗೆ ಜನ್ಮ ಕೊಟ್ಟಳು. ಆ ದಿವಸ ಕ್ರಿ. ಪೂ. 623 ವೈಶಾಖ ಶುದ್ಧ ಪೂರ್ಣಿಮೆ.

ಮೊದಲೇ ಜ್ಞಾನಿಗಳು ಈ ಮಗುಚಕ್ರೇಶ ಸಾರ್ವಭೌಮನಾಗುವನು ಇಲ್ಲವೆ ವಿರಕ್ತ ಸಾರ್ವಭೌಮನಾಗುವನು ಎಂದು ಹೇಳಿದ್ದರು. ಆ ಮಗುವಿಗೆ ಸಿದ್ಧಾರ್ಥನೆಂದು ಹೆಸರಿಟ್ಟರು.

ಶಾಕ್ಯ ರಾಜ್ಯದ ಮೂಲೆ ಮೂಲೆಗಳಿಂದ ಜನರು ಮಗುವನ್ನು ನೋಡಲು ಬಂದರು. ಅಂತಹ ಜನರಲ್ಲಿ ವೃದ್ಧ ತಪಸ್ವಿ ಅಸಿತನೊಬ್ಬ ರಾಜ ದಂಪತಿಗಳು ಅವನಿಗೆ ನಮಸ್ಕಾರಮಾಡಿ ತಮ್ಮ ಮಗುವನ್ನು ಆತನ ಪಾದಗಳ ಮೇಲೆ ಇಡುವಷ್ಟರಲ್ಲಿಯೇ "ಬೇಡ ಬೇಡ" ಎನ್ನುತ್ತಾ ಆ ಮಗುವಿನ ಕಾಲಕೆಳಗೆ ಬಿದ್ದು ಎಂಟು ಸಲ ಆ ಮಗುವಿಗೆ ಪ್ರಣಾಮ ಮಾಡಿದನು. ನೀನು ಅವನೇ. ನೀನು ಬುದ್ಧ. ನೀನು ಜನರಿಗೆ ಉಪದೇಶ ಮಾಡಿ ಅವರನ್ನು ಉದ್ಧಾರ ಮಾಡಲು ಬಂದಿರುವನು. ನನ್ನ ಕಾಲ-ಮುಗಿಯಲಿದೆ. ಆದ್ದರಿಂದ ನಿನ್ನಿಂದ ಉಪದೇಶ ಪಡೆಯುವ ಭಾಗ್ಯ ನನಗಿಲ್ಲ. ಈಗ ನಿನ್ನನ್ನು ನೋಡಿದ್ದೆ ನನ್ನ ಸೌಭಾಗ್ಯ". ಎಂದು ಆನಂದಿಸಿದನು. ಮಾಯಾದೇವಿಯನ್ನು

ನೋಡಿ "ಈ ಮಗುವನ್ನು ಪಡೆದು ಪಾವನಿಯಾದೆ, ದೇವರಿಗೂ ಮಾನವರಿಗೂ ಮೆಚ್ಚುಗೆಯಾದ ನೀನು ಇಂದಿನಿಂದ ಏಳನೇದಿವಸ ಸ್ವರ್ಗವನ್ನು ಸೇರುವೆ" ಎಂದು ನುಡಿದು ಹೋದನು.

ಏಳನೇ ದಿವಸ ಮಾಯಾದೇವಿ ಸುಖವಾಗಿ ನಿದ್ರಿಸಿದವಳು ಮೇಲೇಳಲೇ ಇಲ್ಲ. ಸಿದ್ಧಾರ್ಥರ ಮಲತಾಯಿ ಗೌತಮಿದೇವಿ ಅವನ ಸಾಕು ತಾಯಿಯಾಗಿ ಲೋಕೋ-ದ್ಧಾರಕನಾದ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗಿ ಅವನಿಗೆ ತನ್ನ ಎದೆಹಾಲು ಉಣಿಸಿ ಬೆಳೆಸಿದಳು. ತಾಯಿಯನ್ನು ಕಳೆದುಕೊಂಡ ಮಗುವಿಗೆ ತಾಯಿಯ ಪ್ರೀತಿ-ಯನ್ನು ತುಂಬಿ ಕೊಟ್ಟ ತಂದೆಯ ಪ್ರೇಮ ದ್ವಿಗುಣವಾಯಿತು. ಯಾವುದೇ ನೋವು ಆ ಮಗುವಿಗೆ ಕಣ್ಣಿಗೆ ಬೀಳದಂತೆ ಅರಸನು ಎಚ್ಚರಿಕೆವಹಿಸಿದ್ದನು.

ಸಿದ್ಧಾರ್ಥನು ಶಾಕ್ಯ ಮನೆತನದ ಪದ್ಧತಿಯಂತೆ ಅನೇಕ ಸ್ಪರ್ಧೆಗಳಲ್ಲಿ ವಿಜಯಿಯಾಗಿ ಯಶೋಧರೆಯನ್ನು ವರಿಸಿದನು. ಮನೋಧರೆ ಮತ್ತು ಗೌತಮಿ-ಯರೆಂಬ ಇನ್ನಿಬ್ಬರು ಮಡದಿಯರನ್ನು ಮದುವೆಯಾಗಿದ್ದರು. ಯುವರಾಣಿ ಯಶೋ ಧರೆಗೆ ರಾಹುಲನೆಂಬ ಮಗ ಜನಿಸಿದ್ದನು. ಪುತ್ರೋತ್ಸವದ ಸಂತೋಷಾರ್ಥವಾಗಿ ಸಿದ್ಧಾರ್ಥನು ಅರಮನೆಯ ಕೋಟೆಯಿಂದ ಹೊರಗೆ ವಿಹಾರ ಯಾತ್ರೆ ಕೈಗೊಂಡಾಗ ಆತನ ತಂದೆಯು ಎಷ್ಟೇ ಎಚ್ಚರಿಕೆ ವಹಿಸಿದರೂ ಎಲ್ಲೋ ಒಂದು ಸಂದಿಯ ಮೂಲೆ-ಯಿಂದ ರಾಜ ಬೀದಿಗೆ ಬರುತ್ತಿದ್ದ ಮುದುಕನನ್ನು ನೋಡಿದನು. ಅದೇ ರೀತಿ ದಯನೀಯಸ್ಥಿತಿಯಲ್ಲಿದ್ದ ಕುಷ್ಟ ರೋಗಿಯ ದರ್ಶನವಾಯಿತು. ಇಷ್ಟೇ ಅಲ್ಲದೆ ಸ್ಮಶಾನಾಭಿಮುಖವಾಗಿ ಹೋಗುತ್ತಿದ್ದ ಶವದ ಮೆರವಣಿಗೆ ಕಾಣಿಸಿತು. ಅವಾಗ ಆತನಿಗೆ ಕೂಡಲೇ ತನ್ನ ಕಣ್ಣುಮುಂದೆ ಇಷ್ಟುದಿನವಿದ್ದ ವೈಭವ, ಸೌಂದರ್ಯ, ಸಂತೋಷ ಎಲ್ಲಾ ಕ್ಷಣಿಕವೆಂದು ತಿಳಿಯಿತು. ಬೇನೆಯಿಂದ ತುಂಬಿದ ಈ ಪ್ರಪಂಚ ವನ್ನು ಆ ದೇವರು ಸೃಷ್ಟಿಸಿದನೆಂಬುದು ಆತನಿಗೆ ನಂಬುವುದೇ ಕಷ್ಟವಾಯಿತು. ಮಾನವ ದುಃಖವನ್ನು ದೇವರಿಗೆ ಆರೋಪಿಸದೇ ಅದರ ಸಹಜ ಕಾರಣವನ್ನು ಸ್ವಬುದ್ಧಿಯಿಂದಲೇ ತಿಳಿದು ಸ್ವಾವಲಂಬನೆಯಿಂದ ಪರಿಹರಿಸಬೇಕೆಂದು ತೀರ್ಮಾನಿ ಸಿದನು. ತನ್ನ ಜೀವನವನ್ನು ಈ ಕಾರ್ಯಕ್ಕಾಗಿ ಮುಡುಪಾಗಿಟ್ಟುಕೊಳ್ಳಲು ನಿಶ್ಚ-ಯಿಸಿದನು. ಎಲ್ಲರೂ ಪುತ್ರೋತ್ಸವವನ್ನು ನೆರವೇರಿಸಿ ಮಲಗಿ ನಿದ್ರಿಸುತ್ತಿದ್ದಾಗ ಗೌತಮನು ತನ್ನ ಹಾಸಿಗೆ ಬಿಟ್ಟು ಎದ್ದು ತನ್ನ ರಾಣಿ ಯಶೋಧರೆಯ ಹತ್ತಿರ ಹೋದಾಗ ಯಶೋಧರೆ ಮಗುವನ್ನು ತಬ್ಬಿಕೊಂಡು ನಿದ್ರಿಸುತ್ತಿದ್ದಳು. ತನ್ನ ಶಿರವನ್ನು ಅವಳ ಕಾಲಮೇಲಿಟ್ಟು ಅವಳ ಹಾಸಿಗೆಯ ಸುತ್ತ ಮೂರುಸಲ ಪ್ರದಕ್ಷಿಣೆಮಾಡಿ ತನ್ನ ಸೇವಕ ಚೆನ್ನನನ್ನು ಎಬ್ಬಿಸಿಕೊಂಡು ಹುಣ್ಣಿಮೆಯ ಬೆಳಕಿನಲ್ಲಿ ಆ ರಾತ್ರಿಯೆಲ್ಲಾ ಅರಣ್ಯದ ಮಾರ್ಗ ಹಿಡಿದು ಪ್ರಯಾಣ ಮಾಡಿದನು.

ಬುದ್ಧನು ದಿವ್ಯ ಜ್ಞಾನವನ್ನು ಪಡೆಯಲು ಸಾಕಷ್ಟು ಪ್ರಯಾಸಪಟ್ಟ ಬೋಧಿ ವೃಕ್ಷದ ಕೆಳಗೆ ಪದ್ಮಾಸನಸ್ಥನಾಗಿ ಕುಳಿತು, 'ನನ್ನ ಮೈಚರ್ಮ, ನನ್ನ ಕೈಗಳು, ನನ್ನ ಎಲುಬುಗಳು ಕ್ಷಯಿಸಿ ಹೋಗಲಿ, ನನ್ನ ರಕ್ತ ಹಿಂಗಲಿ. ನನಗೆ ಪೂರ್ಣ ಸಿದ್ಧಿ ದೊರೆಯುವವರೆಗೆ ಈ ಪದ್ಮಾಸ ಬಿಟ್ಟು ಏಳುವುದಿಲ್ಲ ಎಂದು ದೃಢಸಂಕಲ್ಪಮಾಡಿದನು ನಾಲ್ಕು ವಾರಗಳ ಕಾಲ ಹೀಗೆ ಗಾಢ ಧ್ಯಾನರೂಢನಾಗಿ ಕುಳಿತಾಗ ಅವನಿಗೆ ವೈಶಾಖ ಪೂರ್ಣಿಮೆಯ ಮಧ್ಯರಾತ್ರಿಯಲ್ಲಿ ಜ್ಞಾನೋದಯವಾಯಿತು. ದುಃಖದ ವಾಸ್ತವತೆ ದುಃಖದ ಕಾರಣ, ಅದರಿಂದ ಬಿಡುಗಡೆಯಾಗುವ ದಾರಿ ಗೋಚರ ವಾಯಿತು. ಅವನು ಬುದ್ದನಾದನು. ತಥಾಗತನಾದನು. ಅಲ್ಲಿಂದ ಆತನು ಜನರಿಗೆ ಬೋಧಿಸುವ ಕೆಲಸವನ್ನುಮಾಡಿದನು.

ಬದ್ಧನು ಹೇಳಿದ ತತ್ವಗಳೆಲ್ಲಾ 4 ಮೂಲ ತತ್ವಗಳು, 4 ಮಹಾನ್ ಸತ್ಯಗಳು ಹಾಗೂ ಅಷ್ಟಾಂಗ ಮಾರ್ಗಗಳು ಪ್ರಮುಖ ವಾದವುಗಳು. 4 ಮೂಲ ತತ್ವಗಳು ಯಾವುವುವೆಂದರೆ 1. ಅಹಿಂಸೆ 2. ಸತ್ಯನುಡಿವಿಕೆ 3. ಕಳ್ಳತನ ಮಾಡದೇ ಇರುವುದು 4. ಪಾವಿತ್ರತೆ. 4 ಮಹಾನ್ ಸತ್ಯಗಳು ಯಾವುವುವೆಂದರೆ 1. ಜೀವನದಲ್ಲಿ ದುಃಖವಿದೆ 2. ದುಃಖಕ್ಕೆ ಕಾರಣವಿದೆ. (ಆಸೆಯೇ ದುಃಖಕ್ಕೆ ಕಾರಣ) 3 ದುಃಖದ ನಿವಾರಣೆ ಸಾಧ್ಯವಿದೆ 4. ದುಃಖದ ನಿವಾರಣೆಗೆ ಅಷ್ಟಾಂಗ ಮಾರ್ಗವೇ ಶುದ್ಧವಾದ ಮಾರ್ಗ.

ಅಷ್ಟಾಂಗ ಮಾರ್ಗಗಳು ಬುದ್ಧನು ಹೇಳಿದ ತತ್ವಗಳ ತಳಹದಿಯೆನ್ನ ಬಹುದು. ಆ ಮಾರ್ಗಗಳು ಯಾವುವು ಎಂದರೆ 1. ಒಳ್ಳೆಯ ನಂಬಿಗೆ 2. ಒಳ್ಳೆಯ ಆಲೋಚನೆ 3. ಒಳ್ಳೆಯ ಮಾತು 4. ಉತ್ತಮ ನಡತೆ 5. ಉತ್ತಮ ಜೀವನ 6 ಉತ್ತಮ ಪ್ರಯತ್ನ 7. ಉತ್ತಮ ವಿಚಾರಗಳು 8. ಯೋಗ್ಯ ರೀತಿಯ ಧ್ಯಾನ.

ಬೌದ್ಧ ತತ್ವಜ್ಞಾನದ ಕೊನೆಯ ಗುರಿ "ನಿರ್ವಾಣ" ವಾಗಿದ್ದು ನಿರ್ವಾಣವೆಂದರೆ "ನಂದಿಸಿಕೊಳ್ಳು" ಎಂದು ಅರ್ಥ. ಕೆಲವು ಜನರು ಇದನ್ನು ಜೀವದ ಕೊನೆ ಅಥವಾ ನಂದಿಸುವಿಕೆ ಎಂದು ಭಾವಿಸುತ್ತಾರೆ. ಆದರೆ ಇದು ತಪ್ಪು. ಒಂದು ವೇಳೆ ಆ ರೀತಿ ಅರ್ಥವನ್ನು ತೆಗೆದುಕೊಂಡರೆ ಬುದ್ಧನು ತನ್ನ ಜೀವಿತ ಅವಧಿಯಲ್ಲಿಯೇ ನಿರ್ವಾಣವನ್ನು ಪಡೆಯಲು ಸಾಧ್ಯವಿದ್ದಿಲ್ಲಾ. ನಿರ್ವಾಣವೆಂದರೆ "ಆಸೆಗಳನ್ನು ನಂದಿಸುವಿಕೆ" ಇದರಲ್ಲಿ ಕೋಪ, ಸಂಶಯ, ಅಸಹನೆ ಮುಂತಾದ ಭಾವನೆಗಳು ಆರಿಸಲ್ಪಡುತ್ತವೆ ಹಾಗೂ ಮಾನಸಿಕ ಅಪವಿತ್ರತೆಗಳಾದ ಲೈಂಗಿಕ ಆಸೆ, ಮೌಢ್ಯತೆ ಮುಂತಾದವುಗಳು ಹೊರ ದೂಡಲ್ಪಡುತ್ತವೆ.

ಪಾಲಿಧಾರ್ಮಿಕ ಗ್ರಂಥಗಳಲ್ಲಿ ನಿರ್ವಾಣವೆಂದರೆ ಮಾನಸಿಕ ಶಾಂತತೆ ಎಂದು ಹೇಳಲಾಗಿದೆ. ಪೀಟಕಗಳಲ್ಲಿ ನಿರ್ವಾಣವೆಂದರೆ ನಿರಂತರ ಆರೋಗ್ಯ, ಅಂತಿಮ ಕೊನೆ, ಪರಿಶುದ್ಧ ಸುರಕ್ಷತೆ ಹಾಗೂ ನಿರ್ಭಯತೆ ಎಂದು ಹೇಳಲಾಗಿದೆ. ಧಮ್ಮಪರದಲ್ಲಿ ಇದನ್ನು ಆಸೆ ಹಾಗೂ ಸಂಶಯದಿಂದ ಪರಿಪೂರ್ಣ ಸಂತೋಷ. ಪರಿಪೂರ್ಣ ಶಾಂತಿ ಯೆಂದು ಹೇಳಲಾಗಿದೆ. ತತ್ವಜ್ಞಾನ ಹಾಗೂ ನೈತಿಕ ದೃಷ್ಟಿಕೋನದಲ್ಲಿ ಬುದ್ಧನು ಲೌಕಿಕ ಹಾಗೂ ಅಲೌಕಿಕ ಇವೆರಡರ ಬಗ್ಗೆ ಅತಿರೇಕದ ಭಾವನೆಗಳನ್ನು ಬಿಟ್ಟು ಮಧ್ಯಮ ಮಾರ್ಗವನ್ನು ಅನುಸರಿಸಿದನು.

ಬುದ್ಧನು ಹೇಳಿದ ಕರ್ಮಸಿದ್ಧಾಂತದ ಪ್ರಕಾರ ಮಾನವನ ಈಗಿನ ಜೀವನ ಭೂತಕಾಲದ ಮೇಲೆ ಅವಲಂಬಿತವಾಗಿದ್ದು ಆತನ ಭವಿಷ್ಯದ ಜೀವನ ವರ್ತಮಾನದ ಮೇಲೆ ಅವಲಂಬಿತವಾಗಿದೆ. ಕರ್ಮಗಳಿಂದಾಗಿ ಮಾನವನು ಒಂದೇ ರೀತಿ ಇಲ್ಲ. ಹಾಗೂ ಕೆಲವರು ದೀರ್ಘಾಯುಷಿಗಳು ಹಾಗೂ ಕೆಲವರು ಅಲ್ಪಾಯುಷಿಗಳು ಎಂದು ಹೇಳುತ್ತಾರೆ. ಒಂದು ವೇಳೆ ಒಳ್ಳೆಯ ಮನುಷ್ಯರು ತಪ್ಪನ್ನು ಮಾಡಿದಲ್ಲಿ ಅವರು ತಮ್ಮ ಜೀವನದಲ್ಲಿ ಸ್ವಲ್ಪ ನೋವನ್ನು ಅನುಭವಿಸುತ್ತಾರೆ. ಬುದ್ಧನು ಈ ರೀತಿ ಹೇಳುತ್ತಾನೆ. ಒಂದು ಕಪ್ಪೆ ನೀರಿನಲ್ಲಿ ಸ್ವಲ್ಪ ಉಪ್ಪನ್ನು ಹಾಕಿದರೆ ಕುಡಿಯಲು ಸಾಧ್ಯವಿಲ್ಲ. ಆದರೆ ಅದೇ ಸ್ವಲ್ಪ ಉಪ್ಪನ್ನು ಗಂಗಾನದಿಯಲ್ಲಿ ಹಾಕಿದರೆ ಇಡೀ ನೀರೆ ಉಪ್ಪಿನದು ಆಗಲು ಸಾಧ್ಯವಿಲ್ಲ.

ಬುದ್ಧನು ಆತ್ಮದ ಶಾಶ್ವತತೆಯಲ್ಲಿ ನಂಬಿಕೆ ಇಟ್ಟಿಲ್ಲಾ. ಆದುದರಿಂದ ಬುದ್ಧ ಧರ್ಮದಲ್ಲಿ ಪುನರ್ ಜನ್ಮದ ನಂಬಿಕೆಗೆ ಅವಕಾಶವಿಲ್ಲ. ಬುದ್ಧನು ಸಮಕಾಲೀನ ಒಲುವುಗಳ ವಿರುದ್ಧ ಬಂಡಾಯವಿದ್ದನಲ್ಲದೇ ವಾಸ್ತವ ನೀತಿ ಶಾಸ್ತ್ರ ಹಾಗೂ ಸರಳ ತತ್ವಜ್ಞಾನವನ್ನು ಬೋಧಿಸಿದ. ಬುದ್ಧನು ಯಾವಾಗಲೂ ಬೌದ್ಧಿಕವಾಗಿ ತತ್ವವನ್ನು ವಿಶ್ಲೇಷಿಸಲು ಪ್ರಯತ್ನಿಸಿದನಾದರೂ ಆತನು ಧೀರ್ಘ ಚರ್ಚೆಯಿಂದಾ ವಿಮುಖ-ನಾಗುತ್ತಿದ್ದ. ಮೂಢ ನಂಬಿಕೆಯ ವಿರುದ್ಧ ಆತನು ಆಧುನಿಕ ವಿಜ್ಞಾನಿಗಳ ದೃಷ್ಟಿ ಕೋನವನ್ನೇ ಹೊಂದಿದ್ದ. ಬುದ್ಧನ ತತ್ವಗಳು ಆಳವಾದ ವಿಶ್ಲೇಷಣೆ ಹಾಗೂ ಅನುಭವಗಳ ಮೇಲೆ ಅವಲಂಬಿತವಾಗಿದೆಯೇ ಹೊರತು ಬೌದ್ಧಿಕ ಚರ್ಚೆಗಳ ಮೇಲಲ್ಲಾ. ಬುದ್ಧನ ಉದ್ದೇಶ ತತ್ವಜ್ಞಾನದ ಮೇಲೆ ಚರ್ಚೆಯಾಗಿರದೇ ನೋವಿನಿಂದ ಮೋಹ ಪಡೆಯುವುದು ಆಗಿತ್ತು. ದೇಹದಿಂದ ಆತ್ಮ ಬೇರೆಯೇ? ಆತ್ಮ ಶಾಶ್ವತವೇ ಅಥವಾ ಅಲ್ಲವೇ? ಜಗತ್ತು ಪರಿಮಿತಿಗೆ ಒಳಪಟ್ಟಿದೆಯೇ ಅಥವಾ ಇಲ್ಲವೇ? ಜಗತ್ತು ಶಾಶ್ವತವೇ ಅಥವಾ ನಶ್ವರವೇ ? ಈ ಎಲ್ಲಾ ತತ್ವಜ್ಞಾನದ ಪ್ರಶ್ನೆಗಳ ಮೇಲೆ ಆತ ದಿವ್ಯ ಮೌನವನ್ನು ವಹಿಸಿದ್ದಾನೆ. ಈ ಮೌನ ಆತನ ಮೌಢ್ಯತೆಯನ್ನು ತೋರಿಸುವುದಿಲ್ಲ. ಆದರೆ ಆತನ ಜ್ಞಾನವನ್ನು ತೋರಿಸುತ್ತದೆ ಯಾಕೆಂದರೆ ಈ ಪ್ರಶ್ನೆಗಳ ಬಗ್ಗೆ ಎಷ್ಟೇ ಚರ್ಚೆ ಮಾಡಿದರೂ ಉತ್ತರ ಪಡೆಯಲು ಸಾಧ್ಯವಿಲ್ಲ. ನೋವಿನಿಂದನರಳುವ ಮಾನವನಿಗೆ ಈ ರೀತಿ ಬೌದ್ಧಿಕ ಚರ್ಚೆಗಳ ಸಮಯದ ಅಪವ್ಯಯವೆಂದು ತೋರುತ್ತದೆ.

ಪೋತ್ ಪದ್ (...........)ಸೂತ್ರದಲ್ಲಿ ಬುದ್ಧನು 10 ತಾತ್ವಿಕ ಪ್ರಶ್ನೆಗಳನ್ನು ಕೇಳಿ ಅವುಗಳ ಬಗ್ಗೆ ಚರ್ಚೆಮಾಡುವುದು ನಿರುಪಯೋಗಿಯೆಂದು ಹೇಳಿದ್ದಾನೆ. ಬುದ್ಧ ಧರ್ಮದ ಪಾಲಿಸಾಹಿತ್ಯದಲ್ಲಿ ಈ ಪ್ರಶ್ನೆಗಳನ್ನು "ಅವ್ಯಕ್ತನಿ" ಯೆಂದು ಕರೆಯಲಾಗಿದೆ. ಅವು ಯಾವೆಂದರೆ 1 ಈ ಜಗತ್ತು ಶಾಶ್ವತವೇ? 2 ಈ ಜಗತ್ತು ಅ ಶಾಶ್ವತವೇ 3 ಈ ಜಗತ್ತು ಪರಿಮಿತಿಗೆ ಒಳಪಟ್ಟಿದೆಯೇ? 4 ಈ ಜಗತ್ತು ಅ ಪರಿಮಿತವೇ? 5 ದೇಹ ಹಾಗು ಆತ್ಮ ಒಂದೇ 6 ಆತ್ಮ ದೇಹದಿಂದ ಬೇರೆಯೆ? 7 ತತಾಗಥ ಸಾವಿನ ನಂತರ ಪುನಃ ಹುಟ್ಟಿದನೇ? 8 ಸಾವಿನ ನಂತರ ಆತ ಹುಟ್ಟಲಿಲ್ಲವೇ 9 ಪುನರ್‌ಜನ್ಮ ವಿದೇಯೇ ಅಥವಾ ಇಲ್ಲವೇ? 10 ಅಥವಾ ಇವೆರಡೂ ಸುಳ್ಳೇ?

ವಾಸ್ತವಿಕ ದೃಷ್ಟಿಕೋನದಲ್ಲಿ ಈ ಪ್ರಶ್ನೆಗಳಿಗೆ ಉತ್ತರಗಳೇ ಇಲ್ಲ. ಹಾಗೂ ತತ್ವ ಜ್ಞಾನದ ದೃಷ್ಟಿಕೋನದಲ್ಲಿ ಈ ಪ್ರಶ್ನೆಗಳಿಗೆ ಪರಿಹಾರ ಕಂಡುಕೊಳ್ಳುವುದು ಸಾಧ್ಯವಿಲ್ಲ. ಅದುದರಿಂದಲೇ ಬುದ್ಧನು ಇವುಗಳ ಚರ್ಚೆಯಿಂದಾ ವಿಮುಖ ನಾಗಿದ್ದನು.

ಬುದ್ಧನಿಗೆ 80 ನೇ ವರ್ಷ ತುಂಬಿದಾಗ ತನ್ನ ಸಾವು ಬಂದಿದೆಯೆಂದು ಮನವರಿಕೆಯಾಯಿತು. ಶಿಷ್ಯರಿಗೆ ಹೇಳಬೇಕಾದುದನೆಲ್ಲಾ ಹೇಳಿ "ಇನ್ನು ನಿಮ್ಮ ಆತ್ಮವೇ ನಿಮಗೆ ದಾರಿ ದೀಪ. ನಿಮ್ಮ ಆತ್ಮದಿಂದಲೇ ನಿಮ್ಮನ್ನು ಉದ್ಧರಿಸಿಕೊಳ್ಳಬೇಕು. ನಾನು ದೊಡ್ಡವನೆಂದು ನನ್ನ ಮಾತನ್ನು ನಂಬಬೇಡಿ. ಅಕ್ಕಸಾಲಿಗನು ಚಿನ್ನವನ್ನು ಕತ್ತರಿಸಿ, ಕಾಸಿ, ಬಡಿದು, ವರೆಹಚ್ಚಿ ಅದರ ಬಣ್ಣವನ್ನು ನಿರ್ಧರಿಸುವಂತೆ ನೀವು ನನ್ನ ವಚನವನ್ನು ವರೆಹಚ್ಚಿ ನೋಡಿ ಅದು ಪರಿಶುದ್ಧವಾದುದೆಂದು ನಿಮಗೆ ನಿಶ್ಚಯವಾದರೆ ಅದನ್ನು ಒಪ್ಪಿ ಅದರಂತೆ ನಡೆಯಿರಿ." ಎಂದು ಹೇಳಿದ.

ಬೋಧನೆಯನ್ನು ಮಾಡುತ್ತಾ ಕೃಷಿ ನಗರಕ್ಕೆ ಹೋದಾಗ ಆತನ ಶಕ್ತಿ ಕುಂದಿತು. ಎರಡು ಸಾಲು ಮರಗಳ ಮಧ್ಯ ಆನಂದನು ಹಾಸಿದ ಬಟ್ಟೆಯ ಮೇಲೆ ಮಲಗಿದನು. ಅವನು ಹುಟ್ಟಿದ್ದು ಎರಡು ಸಾಲು ಮರಗಳ ನೆರಳಿನಲ್ಲಿ. ಬಯಕೆ ಯಾದದ್ದು ಸಾಲು ಮರಗಳ ಕೆಳಗೆ.

ಅವನು ಹುಟ್ಟಿದ್ದು ವೈಶಾಖ ಪೂರ್ಣಿಮೆಯೆಂದು. ಪರೀನಿರ್ವಾಣವಾದುದ್ದು ಅದೇ ದಿನ. ಈ ಲೋಕ ಬಿಟ್ಟಿದ್ದು ಅದೇ ದಿನ.

ಬುದ್ಧಂ ಶರಣಂ ಗಚ್ಛಾಮಿ
ಧರ್ಮಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ ●

# ಸಂಸ್ಕೃತಿ ಎಂದರೇನು ?

ಶಂಕರಗೌಡ. ವೈ. ಪಾಟೀಲ, ಚಾಲುಕ್ಯನಗರ, 5ನೇ ಕ್ರಾಸ್, ಬಾದಾಮಿ ಅಂಚೆ-587201,

ಸಂಸ್ಕೃತಿ ಎಂಬ ಪದವು ಬಹು ವಿಶಾಲವಾದ ಅರ್ಥಪಡೆದುಕೊಂಡಿದೆ. ಸಂಪ್ರದಾಯಗಳಿಂದ ಹಿಡಿದು ವ್ಯಕ್ತಿಯ ಆಚರಣೆಯವರೆಗೆ ಅದರ ವ್ಯಾಪ್ತಿ ಹರಡಿದೆ. ಮಾನವ ಜನಾಂಗದಂತೆ ಸಂಸ್ಕೃತಿ ಎಂಬ ಶಬ್ದವನ್ನು ಇಂಗ್ಲೀಷಿನ "Culture" ಎಂಬುದಕ್ಕೆ ಪ್ರತಿಯಾಗಿ ಉಪಯೋಗಿಸಲಾಗುವದು 'Culture' ಎಂಬುದರ ಮೂಲ ಪದ Cult ಅಥವಾ Cultus ಎಂದು. ಇದರ ಅರ್ಥ ಗೌರವಿಸು, ಆರಾಧಿಸು ಮುಂತಾದ ಅರ್ಥಗಳನ್ನು ಕೊಡುತ್ತದೆ ಎಂದು ಡಿ. ವಿ. ಗುಂಡಪ್ಪನವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ.

ಸಮಷ್ಟಿ (ಸಮಾಜ) ಜೀವನದ ಅಂತರಂಗದ ಸಾಧನೆಗೆ ಸಹಕಾರಿಯಾದ ಸಾಮುಗ್ರಿಗಳಿಂದ ಹಿಡಿದು, ವ್ಯಷ್ಟಿ (ವ್ಯಕ್ತಿ) ಜೀವನದ ವಿಕಾಸಕ್ಕೆ ಕಾರಣವಾಗುವ ಸಾಮಾಜಿಕ ಪರಿಕರಗಳೂ ಸಹ ಸಂಸ್ಕೃತಿಯಲ್ಲೇ ಸಮಾವೇಶಗೊಳ್ಳುತ್ತವೆ. ಒಟ್ಟಿನ ಮೇಲೆ ಆಯಾ ಪ್ರದೇಶದ, ಆಯಾ ಭಾಷೆಯ, ಆಯಾ ಧರ್ಮದ ಜನಗಳು ತಮ್ಮ ಸಮಸ್ಯೆಗಳಿಗೆ ಉತ್ತರವನ್ನು ಕಾಣಬಯಸುವ ಅಂತರಂಗದ ಸಾಧನೆಯೇ ಸಂಸ್ಕೃತಿ, ಅದೇ ಭಾರತೀಯ ಸಂಸ್ಕೃತಿ, ಕರ್ನಾಟಕ ಸಂಸ್ಕೃತಿ. ಮಾನವನ ಅಂತರಂಗ ಜೀವನದ ಚಿತ್ರಣವೇ ಸಂಸ್ಕೃತಿ. ಇದು ಸಂಗೀತ, ಶಿಲ್ಪ, ಚಿತ್ರ, ನೃತ್ಯ, ಸಾಹಿತ್ಯ ಮತ್ತು ಧರ್ಮ ಹೀಗೆ ಕವಲುಗಳಾಗಿ ಹರಡುತ್ತದೆ.

"ಸಂಸ್ಕೃತಿ ಎಂದರೆ, ಒಂದು ಸಮಾಜದ ಜೀವನ ವಿಧಾನ, ಅದರ ಆಚಾರ ವ್ಯವಹಾರ, ಅದರ ಸಂಸ್ಥೆಗಳು, ಆಲೋಚನಾ ವಿಧಾನಗಳು, ಸಂಸ್ಕೃತಿ, ನಾವು ಅರಿತ ಆಲೋಚನಾಗಳು, ಉಕ್ತಿಗಳು, ನಮ್ಮ ಭಾವನೆ ಮತ್ತು ಪದ್ಧತಿಗಳ ಮೇಲೆ ಬೆಳಕು ಬೀರಬೇಕು. ನಮ್ಮನ್ನು ನಾವು ತಿದ್ದಿಕೊಳ್ಳಲು ಸಹಾಯ ಮಾಡುವುದು. ಹೀಗೆ ನಮ್ಮನ್ನು ನಾವು ಉತ್ತಮಗೊಳಿಸಲು ಮಾಡುವ ಪ್ರಯತ್ನವೇ ಸಂಸ್ಕೃತಿ" ಎಂದು ಮ್ಯಾಥೀವ್ ಅರ್ನಾಲ್ಡ್ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ರವೀಂದ್ರನಾಥ ಟ್ಯಾಗೋರರವರು "Civilization" ಎಂಬ ಪದವನ್ನು ಸಂಸ್ಕೃತಿ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಸಂಸ್ಕೃತಿ ಎಂಬುದು ಒಂದು ಆಕಾರವನ್ನು ತಳೆದು ನಿಂತ ಆಕಸ್ಮಿಕ ಘಟನೆಗಳ ಮೊತ್ತವಲ್ಲ. ನಮ್ಮ ಪೂರ್ಣತೆಗಾಗಿ ರೂಪಿಸಿ-ಕೊಂಡ ಯಾವುದೇ ದಿವ್ಯ ದರ್ಶನದ ಅಭಿವ್ಯಕ್ತಿ, ಇದಕ್ಕೆ ಸಮಾನವಾದ ಭಾರತೀಯ ಪದ ಧರ್ಮ. ಮನುಷ್ಯನ ಸಾಂಗಿಕ ಜೀವನನಲ್ಲಿ ಅಭಿವ್ಯಕ್ತಿಗೊಂಡ ಧರ್ಮವೇ ಸಂಸ್ಕೃತಿ. ಟ್ಯಾಗೋರರು ಇನ್ನೊಂದೆಡೆ ಸಂಸ್ಕೃತಿಯನ್ನು "ಮನೋಮಯ ಜೀವನ" ಎಂದು ಕರೆದಿದ್ದಾರೆ.

ಸಂಸ್ಕೃತಿ ಎಂಬುದು ಒಬ್ಬ ವ್ಯಕ್ತಿಯಲ್ಲಿ ಕಂಡು ಬರುವುದಕ್ಕಿಂತ ಹೆಚ್ಚಾಗಿ ಒಂದು ಸಮಾಜದ ಅಥವಾ ಗುಂಪಿನ ಜೀವನ ವಿಧಾನದಲ್ಲಿ ಕಂಡುಬರುತ್ತದೆ. ಸಂಸ್ಕೃತಿಯ ಸಾಧನೆಗಳು ಯಾವಾಗಲೂ ಪ್ರಗತಿಯ ಮಾರ್ಗದಲ್ಲಿ ನಡೆಯುತ್ತವೆ. ಸಂಸ್ಕೃತಿಯ ಮೂಲಭೂತ ಸಾಮಗ್ರಿ, ಪೂರ್ಣತೆಯ ಪ್ರೇಮ ಅಧ್ಯಯನ, ಅಧ್ಯಯನವೆಂದರೆ, ಕೇವಲ ಬೌದ್ಧಿಕವಾದುದಲ್ಲ. ಅದು ಹೃದಯದ ಪರಿಪಕ್ವತೆಗೆ ಸಹಕಾರಿಯಾಗಬೇಕು. ಸುತ್ತಮುತ್ತಲಿನ ಜನರ ದುಃಖದಲ್ಲಿ ಭಾಗಿಯಾಗುವಂತಹ ಅನುಕಂಪವನ್ನು ಉಕ್ಕಿಸಬೇಕು. ಅವರ ದುಃಖವನ್ನು ಹೋಗಲಾಡಿಸಲು ಹಂಬಲಿಸಬೇಕು. ಅದು ಸಂಸ್ಕೃತಿ ಎನಿಸಿಕೊಳ್ಳುತ್ತದೆ ಸಂಸ್ಕೃತಿಎಂಬುದು ವ್ಯಕ್ತಿಯ ಸ್ವಭಾವಕ್ಕೆ ಸಂಸ್ಕಾರವನ್ನು ಕೊಡುವ ಶಕ್ತಿ. ಒಟ್ಟನಲ್ಲಿ ಅಂತರಂಗದ ಪರಿವರ್ತನೆ ಮತ್ತು ಪರಿಪಾಕಗಳೇ ನಿಜವಾದ ಸಂಸ್ಕೃತಿ. ಸಂಸ್ಕೃತಿ ಎಂಬುದು ಅಂತರಂಗದ ವಿಕಾಸ. ನಿಜ. ಆ ವಿಕಾಸಕ್ಕೆ ಸಾಮಾಜಿಕ ಪರಿಕರಗಳೂ ಹೌದು. ನುಡಿದಂತೆ ನಡೆಯುವದೇ ಸಂಸ್ಕೃತಿ. ಸಮಾಜದೊಡನೆಯ ಸಹಬಾಳ್ವೆಯೇ ಸಂಸ್ಕೃತಿ. ಶೀಲ ಸೌಭಾಗ್ಯವೇ ಸಂಸ್ಕೃತಿ. ಆತ್ಮ ಶಿಕ್ಷಣವೇ ಸಂಸ್ಕೃತಿ.

---

## ದುಡಿತದಿಂದ ಗಳಿಸಬೇಕು ನಮ್ಮ ಹೊಟ್ಟೆ

— ಶ್ರೀ ನಾಗೇಶ್‌ನಿಲುಗಲ್, ಕಂಪಗಲ್, ಹುನಗುಂದ ತಾ॥, ಬಿಜಾಪುರ ಜಿಲ್ಲೆ

ಹೆಣ್ಣು, ಹೊನ್ನು ಮಣ್ಣಾಶೆ ಬೇಡೆಂದರಪ್ಪ ಹಿರಿಯರು ।
ಆಶೆಬುರುಕ ಜನರು ಎಲ್ಲಾಕಡೆಗೆ ತುಂಬಿರುವರು ॥ಪ॥
ಹೆಣ್ಣು, ಹೊನ್ನು ಮಣ್ಣಿನಾಶೆಗಾಗಿ ।
ಬಡಿದಾಡುತಿಹರು ಮನುಷತ್ವದೂರಿ ।
ದುರಾಶೆಯ ದಳ್ಳುರಿಯಲಿಸಾಗಿ ।
ಮಾನವ ಕುಲಕೆ ಮುಳ್ಳಾಗುತ್ತಿಹರು ನೋಡಿ ॥ ೧ ॥
ಹೆಣ್ಣಿನಾಶೆಯಿಂದ ರಾವಣನ ರುಂಡ ಹೋಯಿತು ।
ಮಣ್ಣಿನಾಶೆ ಮಾಡಿದ ಕೌರವನ ಮುಂಡ ಹೋಯಿತು ।
ಹೊನ್ನಿನಾಶೆಯಿಂದ ಜಗದ ಜಂಜಡವು ಹೆಚ್ಚಿತು ।
ಖಂಡತುಂಡಾಗಿ ಜಗ ಇತ್ತಂಡವಾಯಿತ್ತು ॥ ೨ ॥
ಹೆಣ್ಣು, ಹೊನ್ನು, ಮಣ್ಣು ಎಂದಿಗೂ ಶಾಶ್ವತವಲ್ಲ ।
ಪ್ರೀತಿ, ವಿಶ್ವಾಸ, ಐಕ್ಯತೆ, ಆದರೆ ಬೇಕಾಗಿಲ್ಲ !
ಅನ್ಯಾಯ, ಅಧರ್ಮ ಅದರ ರೀತಿ ನೀತಿ ।
ಸತ್ಯ, ಧರ್ಮ, ನ್ಯಾಯಕೆ ತರುವದಲ್ಲ ಭೀತಿ ॥ ೩ ॥
ಬುದ್ಧ, ಬಸವ, ಗಾಂಧೀಜಿ, ಎಂಥ ಮಹಾತ್ಮರು ।
ಆಶೆ ಬಿಟ್ಟು ಈಶ ಪದವಿ ಪಡೆದ ಪುಣ್ಯ ಪುರುಷರು ।
ಹೆಣ್ಣು, ಹೊನ್ನು ಮಣ್ಣಿನಾಶೆಯನ್ನು ಬಿಟ್ಟು ।
ಸತ್ಯ, ಧರ್ಮ, ನ್ಯಾಯ, ನೀತಿಗೆ ಬೆಳಕನು ಕೊಟ್ಟರು ॥ ೪ ॥
ಆಶೆಬಿಟ್ಟು ಆದರ್ಶರತ್ನಗಳ ನಡೆನುಡಿ ।
ನೆನಪಿರಬೇಕು ಸದಾನಮ್ಮ ಹೃದಯದಲ್ಲಿ,
ಅಣ್ಣ, ತಮ್ಮ ಭ್ರಾತೃಭಾವದಿಂದ
ಸಹಮತದ ಬಾಳ್ವೆ ನಡೆಸಬೇಕು ಒಮ್ಮತದಿಂದ ॥ ೫ ॥
ಸತ್ಯ, ಧರ್ಮ, ನ್ಯಾಯ, ನೀತಿ ನಮ್ಮ ದೇಶದ ಉಸಿರು ।
ಪ್ರೀತಿವಿಶ್ವಾಸಗಳು ಈ ದೇಶದ ಹಸಿರು ।
ಆಶೆ ಆಮಿಷೆಗಳಿಗೆ ಬಲಿಯಾಗಿ ಬಡಿದಾಡದೆ ।
ದೇಶದ ಐಕ್ಯತಗೆ ಮುಂದಾಗಬಾರದೆ ॥ ೬ ॥
ದುಡಿತಕ್ಕೆ ಬಳಸಬೇಕು ನಮ್ಮ ರಟ್ಟೆ ।
ದುಡಿತದಿಂದ ಗಳಿಸಬೇಕು ನಮ್ಮ ಹೊಟ್ಟೆ ।
ದುಡಿತವೇ ದುಡ್ಡಿನ ತಾಯಿ ಎಂದು ।
ಮುಡುಪಾಗಿಡಬೇಕು ದುಡಿಮೆಗೆ ।
ನಮ್ಮ ಜೀವನ ಎಂದೆಂದು ।

# ರೋಗ ನಿವಾರಕಗಳು

ಜಿ. ವಿ ಪ್ರಭು ನಂ. 3305, 4ನೇ ಕ್ರಾಸ್, ಗಾಯಿತ್ರಿನಗರ, ಬೆಂಗಳೂರು-560 021.

ಜ್ಞಾನೋದಯವನ್ನು ಪಡೆದ ಬುದ್ಧನು ಒಮ್ಮೆ ಕಾಶಿ ಪಟ್ಟಣದ ಸಮೀಪ ಒಂದು ವೃಕ್ಷದ ಕೆಳಗೆ ಕುಳಿತು ಉಪದೇಶಗಳನ್ನು ನೀಡುತ್ತಿದ್ದ. ಗೌತಮ ಬುದ್ಧನ ದರ್ಶನ ಪಡೆಯಲು ಒಬ್ಬಶ್ರೀಮಂತನು ರಥವೇರಿ ಅಲ್ಲಿಗೆ ಬಂದ. ಶ್ರೀಮಂತ ಭಾರಿ ಸ್ಥೂಲಕಾಯ ದೇಹದವನಾದ್ದರಿಂದ, ಅತ್ಯಂತ ಕಷ್ಟ ಪಟ್ಟು ರಥ ಇಳಿದು ಇಬ್ಬರು ಪರಿಚಾರಕರ ಸಹಾಯದಿಂದ ಬುದ್ಧನ ಬಳಿಗೆ ಬಂದ.

ಒಂದು ಬೆಟ್ಟವೇ ತನ್ನ ಬಳಿಗೆ ನಡೆದು ಬರುತ್ತಿರುವಂತೆ ಭಾಸವಾಯಿತು ಬುದ್ಧನಿಗೆ. ಶ್ರೀಮಂತನು, ಬುದ್ಧನಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಬೇಕೆಂದು ಕೊಂಡರೂ ಅವನಿಗೆ ಸಾಧ್ಯವಾಗದೆ ಎರಡು ಕೈಗಳನ್ನು ಜೋಡಿಸಿ ವಿನಯ ಪೂರ್ವಕವಾಗಿ ನಮಸ್ಕರಿಸಿ ಹೀಗೆ ನಿವೇದಿಸಿಕೊಂಡ.

"ಬುದ್ಧದೇವಾ ....... ನಿಮಗೆ ನಾನು ಯೋಗ್ಯವಾದ ರೀತಿಯಲ್ಲಿ ನಮಸ್ಕರಿಸ ಲಾಗಲಿಲ್ಲ ಅದಕ್ಕೆ ನನ್ನನ್ನು ಕ್ಷಮಿಸಿರಿ. ನನ್ನ ಹೊಟ್ಟೆ ಅಗಾಧವಾಗಿ ಬೆಳೆದಿದೆ ನನಗೆ ಸದಾ ನಿದ್ದೆ, ತೂಗಡಿಕೆಯ ಜೊಂಪು! ರಕ್ತದೊತ್ತಡ, ಮಧು ಮೇಹ, ಹೃದ್ರೋಗ ಇತ್ಯಾದಿ ರೋಗಗಳ ಅನಾರೋಗ್ಯ ಕಾರಣದಿಂದಾಗಿ ಕೆಲಸಮಾಡಲಾಗದೆ, ಸರಳವಾಗಿ ಓಡಲಾಗದೆ ಈ ದುಃಸ್ಥಿತಿಯಲ್ಲಿದ್ದೇನೆ".

ಶ್ರೀಮಂತನ ದಡೂತಿ ದೇಹವನ್ನು ಕಂಡ ಬುದ್ಧ ಆತನು ಎಂಥ ಜೀವನವನ್ನು ಸಾಗಿಸುತ್ತಿದ್ದಾನೆ ಎಂಬುದನ್ನು ನಿಗ್ರಹಿಸಿದ. "ಈ ನಿನ್ನ ರೋಗಗಳಿಗೆ ಕಾರಣವೇನೆಂದು ತಿಳಿದುಕೊಳ್ಳುವ ಆಸಕ್ತಿ ಇದೆಯೋ ನಿನಗೆ?" ಎಂದು ಪ್ರಶ್ನಿಸಿದನು ಬುದ್ಧ.

"ಹೇಳಿ ಬುದ್ಧದೇವಾ, ಆದ್ದರಿಂದಲೇ ನಿಮ್ಮ ದರ್ಶನವನ್ನು ಪಡೆಯಲು ನಿಮ್ಮ ಬಳಿಗೆ ಬಂದಿರುವೆನು." ಎಂದು ವಿನೀತನಾಗಿ ಹೇಳಿದ.

" ಯಥೇಚ್ಛವಾದ ಆಹಾರ ಸೇವನೆ, ಅತಿಯಾದ ನಿದ್ರೆಯ ಮೇಲಿನ ವ್ಯಾಮೋಹ, ದೈಹಿಕ ಸುಖಗಳ ಮೇಲೆ ಮಿತಿಮೀರಿದ ಆಶೆ, ಮಾನಸಿಕ ವಿಚಾರ ಶಕ್ತಿ ಇಲ್ಲದಿರುವುದು, ಶಾರೀರಿಕ ಶ್ರಮವಿಲ್ಲದ ಕೆಲಸಕಾರ್ಯಗಳನ್ನು ಮಾಡುವುದು ಈ ಐದು ಕಾರಣಗಳೇ ಎಲ್ಲಾ ರೋಗಗಳಿಗೂ ಕಾರಣ. ನೀನು ನಿನ್ನ ಎಲ್ಲಾ ರೋಗ ಗಳಿಗೂ ವಿಮುಕ್ತಿ ಪಡೆಯಬೇಕೆಂದರೆ; ನೀನು ನಿನ್ನ ಆಹಾರದ ಮೇಲೆ ನಿಯಂತ್ರಣ ವನ್ನು ಇಟ್ಟುಕೋ. ನಿನ್ನ ಮಾನಸಿಕ, ಶಾರೀರಿಕ ಸಾಮರ್ಥ್ಯಗಳನ್ನು ಬಳಸಿಕೊಂಡು

ನಿತ್ಯವು ಕೆಲಸಗಳನ್ನು ಮಾಡು ನಿದ್ರೆ ಹಾಗೂ ಶಾರೀರಿಕ ಸುಖಗಳನ್ನು ಸಾಧ್ಯ
ಸಾಧ್ಯವಾದಷ್ಟೂ ಕಡಿಮೆ ಮಾಡಿಕೋ, ಆಗ ನಿನ್ನ ಎಲ್ಲಾ ರೋಗಗಳು ಮಾಯವಾ
ನೀನು ಆರೋಗ್ಯವಂತನಾಗಿರುತ್ತೀಯ" ಎಂದು ಉಪದೇಶಿಸಿ ಕಳುಹಿಸಿದ ಬು
ಶ್ರೀಮಂತನಿಗೆ.

ಶ್ರೀಮಂತ ಮನೆಗೆ ಹಿಂದಿರುಗಿ ಬುದ್ಧನ ಉಪದೇಶಗಳನ್ನು ಚಾಚೂ ಬಿಡ
ಪಾಲಿಸಿದ. ಆಹಾರವನ್ನು ಮಿತವಾಗಿ ಸೇವಿಸತೊಡಗಿದ. ನಿದ್ರೆಯನ್ನು ನಿಯಂತ್ರ
ದಲ್ಲಿಟ್ಟುಕೊಂಡು. ಎಲ್ಲಾ ಕೆಲಸ ಕಾರ್ಯಗಳನ್ನು ಅವನೇ ಶ್ರಮಪಟ್ಟು ಮಾಡ
ಕೊಳ್ಳತೊಡಗಿದ. ಶಾರೀರಿಕ ಸುಖಗಳನ್ನು ತೊರೆದ. ದಿನೇ ದಿನೇ ಶ್ರೀಮಂತ
ಆರೋಗ್ಯ ಸುಧಾರಿಸಿತು.

ಒಂದು ತಿಂಗಳ ನಂತರ ಶ್ರೀಮಂತ ತಾನೇ ಸ್ವತಃ ನಡೆದುಕೊಂಡು ಬುದ್ಧ
ಬಳಿಗೆ ಬಂದ — "ಬುದ್ಧದೇವಾ .... .. ನಾನು ತಮ್ಮಿಂದ ಉದ್ಧಾರವಾದೆ ನಿ
ಸಹಾಯವನ್ನು ನಾನು ಮರೆಯಲಾರೆ. ಈಗ ನಾನು ಆಧ್ಯಾತ್ಮ ಜ್ಞಾನವನ್ನು ಪಡೆಯ
ಬಂದಿದ್ದೇನೆ "ಎಂದ ಶ್ರೀಮಂತ. ಆಗ ಬುದ್ಧನು ಶ್ರೀಮಂತನಿಗೆ ಹೀಗೆ ಉಪದೇಶಿಸಿದ

"ಲೌಕಿಕ ವ್ಯಕ್ತಿ ತನ್ನ ದೇಹವನ್ನು ಬೆಳೆಸಿಕೊಳ್ಳುತ್ತಾನೆ. ಆದರೆ ವಿದ್ವಾಂ
ತನ್ನ ಆಧ್ಯಾತ್ಮ ಜ್ಞಾನವನ್ನು ವೃದ್ಧಿ ಪಡಿಸಿಕೊಳ್ಳುತ್ತಾನೆ ನಾಲಗೆ ಚಪಲವನ
ಹಸಿವನ್ನು ತೀರಿಸಿಕೊಳ್ಳುವುದರಲ್ಲೇ ನಿರತನಾದವನು ತನ್ನ ವಿನಾಶವನ್ನು ತಾನೇ ಸೃಷ್ಟಿ
ಕೊಳ್ಳುತ್ತಾನೆ. ಆದರೆ ಧರ್ಮ ಮಾರ್ಗದಲ್ಲಿ ನಡೆಯುವವನು ಪಾಪಗಳಿಂದ, ರೋ
ಗಳಿಂದ ವಿಮೋಚನೆ ಪಡೆಯುತ್ತಾನೆ. ಅಷ್ಟೇ ಅಲ್ಲ; ದೀರ್ಘಾಯುವಾಗಿ ಬಾಳುತ್ತಾನೆ

## ಭಕ್ತಿ - ಮುಕ್ತಿ.

ಭಕ್ತಿ ಮುಕ್ತಿಗಳಿಗೆಲ್ಲ, ಭಾವವೇ ಮೂಲಾಧಾರ;
ಭಾವವಿಲ್ಲದ ಭಕ್ತಿ ಸಲ್ಲ, ಭಕ್ತಿ ಇಲ್ಲದೆ ಮುಕ್ತಿ ಇಲ್ಲ;
-'ಯದ್ ಭಾವಂ ತದ್ಭವತಿ'- ಅನ್ನದೇ ಅಭಿವಚನ:
ಅದು ಕಾರಣ,

ಒಳಿತನೇ ಭಾವಿಸಿರಿ, ಒಳಿತಿಗೇ ಜೀವಿಸಿರಿ,
ಸಕಲರಿಗೆ ಸೊಗ ಮುಕ್ಕು, ಇಹಪರಕೆ ಸಾಧನ ಮುಕ್ಕು.

ಹೈದರಾಬಾದ್. ಶಾರದಾ. ಜಡೆ

# :- ಕಾಯಕವೇ ಕೈಲಾಸ -:

ನಾಗರಾಜ ದ್ಯಾಮನಕೊಪ್ಪ, ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.

"ಕಾಯಕವೇ ಕೈಲಾಸ" ಎಂಬುದು ಕನ್ನಡನಾಡು ಜಗತ್ತಿಗಿತ್ತ ಅಪೂರ್ವ ಕಾಣಿಕೆ. ಇತ್ತೀಚಿನ ದಿನಗಳಲ್ಲಿ ಸಮತಾವಾದದ ಮಾತು ಕೇಳಿ ಬರುತ್ತಿದ್ದರೂ ಇದಕ್ಕೆ ಮಾದರಿಯಾಗುವಂತಹ ಅಮೂಲ್ಯ ತತ್ವವನ್ನು ಕನ್ನಡನಾಡು 800 ವರ್ಷಗಳಷ್ಟು ಹಿಂದೆಯೇ ಕೊಡಮಾಡಿದೆ. ಭಾರತ ಸಂಸ್ಕೃತಿಯ ಅದರಲ್ಲಿಯೂ ವಿಶೇಷವಾಗಿ ಕನ್ನಡ ಸಂಸ್ಕೃತಿಯ ಪರಂಪರೆಯಾಗಿ ಕಾಯಕ ತತ್ವ ಬೆಳೆದು ಬಂದಿದೆ ಸುಮಾರು ಸಾವಿರಾರು ವರ್ಷಗಳ ಭವ್ಯ ಪರಂಪರೆ ಇರುವ ನಾಡು ಇತಿಹಾಸದಲ್ಲಿ ಉಜ್ವಲವಾಗಿ ಬೆಳಗಿದ ಕಾಲ 12ನೆಯ ಶತಮಾನ. ಶಿವಶರಣರ ಈ ಕ್ರಾಂತಿಯುಗ ಕರ್ನಾಟಕದ ರಾಜಕೀಯ. ಧಾರ್ಮಿಕ, ಸಾಹಿತ್ಯಕ, ಸಾಮಾಜಿಕ ಮೊದಲಾದ ಕ್ಷೇತ್ರಗಳಲ್ಲಿ ಮಹತ್ವಪೂರ್ಣವಾದ ಕ್ರಾಂತಿಯನ್ನೆಸಗಿ "ದಯವೇ ಧರ್ಮದ ಮೂಲ" ಎಂದು ಸಾರಿ "ಕಾಯಕವೇ ಕೈಲಾಸ"ವೆಂದು ಬೋಧಿಸಿ, ಮಾನವ ಭವ್ಯ ಮಾನವನಾಗುವ, ಮಾನವೀಯತೆಯ ಮಹೋನ್ನತಿಯನ್ನು ಅತಿ ಸಹಜ ಸ್ಥಿತಿಯಲ್ಲಿ ಸಾಧಿಸುವ ಪರಿಯನ್ನು ತೋರಿಸಿಕೊಟ್ಟಿತು ಹಾಗಾದರೆ ಕಾಯಕವೆಂದರೇನು? ಕಾಯಕದಿಂದ ಕೈಲಾಸ ಸಾಧ್ಯವೆ? ಎಂಬೆಲ್ಲಾ ಪ್ರಶ್ನೆಗಳು ನಮಗೆ ಎದುರಾದಾಗ ವಿಚಾರವಂತ ಮನಸ್ಸು ಅವುಗಳಿಗೆ ಉತ್ತರ ಕಂಡುಕೊಳ್ಳುವ ಹಾತೊರೆಯುತ್ತದೆ. ಸತ್ಯ ಶುದ್ಧ ಕಾಯಕ ಕೈಗೊಂಡು ಆ ಮೂಲಕ ಕೈಲಾಸ ಕಂಡುಕೊಂಡ ಮಹನೀಯರ ಜೀವನ ಸಾಧನೆ ಭವಿಷತ್ ಬಾಳಿಗೆ, ಯುವ ಪೀಳಿಗೆಗೆ ಹೇಗೆ ಮಾರ್ಗ ದರ್ಶನವಾಗಿದೆಯೆಂಬುದರ ಸ್ಥೂಲ ಪರಿಚಯವೇ ಈ "ಕಾಯಕವೇ ಕೈಲಾಸ" ಎಂಬುದು.

"ಕಾಯಕ" ಎಂದರೆ ದುಡಿತ ಎಂದು ಸಾಮಾನ್ಯವಾಗಿ ಅರ್ಥೈಸಬಹುದಾದರೂ ಅದು ಕೇವಲ ದುಡಿತ ಎಂಬುದಕ್ಕೆ ನಿಲ್ಲದೆ ಇನ್ನು ಮುಂದೆ ಹೋಗುತ್ತದೆ. ಮೈದಣಿಸಿ ದುಡಿಯುವುದು ದುಡಿತವೆನಿಸಿದರೂ, ಕಾಯಕ ಮಾತ್ರ ಇದಕ್ಕಿಂತ ಭಿನ್ನವಾದ ಹಾಗೂ ಅಷ್ಟೇ ಅರ್ಥಪೂರ್ಣವಾದ ಅರ್ಥವನ್ನೊಳಗೊಂಡಿದೆ. "ಕಾಯವಿಡಿದಿಹನ್ನಬರ ಶಿವಭಕ್ತಂಗೆ ಕಾಯಕವೇ ಕೈಲಾಸ" ಎಂದು ಹೇಳುವ ಶರಣರ ಮಾತಿನಲ್ಲಿ ಕಾಯಕವೆಂಬುದು ಜಗತ್ತಿನ ಸಂಸಾರಕ್ಕಾಗಿ ಕುದಿಯುತ್ತಾ ಕೈಗೊಳ್ಳುವ ಉದ್ಯೋಗ. ಶೀಲಯುತ ಸೇವೆ. ಪರಿಶುದ್ಧ ಪರಮವೃತ್ತಿಯಿಂದ ಮನಮುಟ್ಟಿ ಮಾಡುವ ದಾಸೋಹ ಭಾವದ ಮಾಟ. ಹೀಗೆ ಕಾಯಕವೆಂಬುದು ಶರಣರಿಂದ ವಿಶಿಷ್ಟ ಅರ್ಥವನ್ನು ಪಡೆಯಿತು. ಜೈನರ ಅಪರಿಗ್ರಹ, ವೈದಿಕರ ನಿಷ್ಕಾಮಕರ್ಮ, ಕ್ರೈಸ್ತರ ಕಾಲಿಂಗಗಳಿಂದ ಭಿನ್ನವೂ, ಅರ್ಥಪೂರ್ಣವೂ ಆದ ಈ ಕಾಯಕ ಮೌಲ್ಯ. ವೈಶಿಷ್ಟ್ಯ ಪೂರ್ಣವಾದ ಜೀವನ ಮೌಲ್ಯವಾಗಿ ಬೆಳೆದು ಬಂದೀತು.

ಹೀಗೆ ಕಾಯಕದ ಮಹತ್ವವನ್ನು ಸಾರಿ ಸತ್ಯ ಶುದ್ಧ ಕಾಯಕದಲ್ಲಿಯೇ ಕೈಲಾಸ ಕಂಡುಕೊಂಡ ಶರಣರು ಕೇವಲ ತತ್ವಹೇಳಿ ಸುಮ್ಮನಾಗಲಿಲ್ಲ. ಅದನ್ನು ಆಚರಣೆಗೆ ತಂದರು. "ಭಕ್ತಿ ಸುಭಾಷೆಯ ನುಡಿಯ ನುಡಿವೆ ನುಡಿದಂತೆ ನಡೆವೆ ಎನ್ನ ನಡೆಯೊಳಗೆ ಒಂದ ಜವೆ ಕೊರತೆಯಾದರೆ ಎನ್ನನದ್ದಿ ನೀನೆದ್ದು ಹೋಗು ಕೂಡಲ ಸಂಗಮದೇವಾ" ಎನ್ನುವಂತಹ ಅಚಲ ನಿಲುವನ್ನು ತಾಳಿದ ಶರಣರು ನುಡಿದಂತೆ ನಡೆದರು. ಪ್ರತಿಯೊಬ್ಬರು ಒಂದೊಂದು ಕಾಯಕವಮಾಡಿ ಜೀವನ ಸಿದ್ಧಿಯನ್ನು ಪಡೆದರು. 12 ನೆಯ ಶತಮಾನದ ಶಿವಶರಣರನ್ನು ಗುರುತಿಸುವಾಗ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ, ಆಯ್ದಕ್ಕಿ ಮಾರಯ್ಯ, ಕದಿರೆಯ ರೇಮ್ಮವ್ವೆ, ಬೆರಣಿಯ ಅಣ್ಣಲದೇವಿ, ಮೋಳಿಗೆ ಮಾರಯ್ಯ, ಮೋಳಿಗೆಯ ಮಹದೇವಮ್ಮ, ಆಯ್ದಕ್ಕಿ ಲಕ್ಕಮ್ಮ ಎಂದು ಅವರ ಹೆಸರಿನೊಂದಿಗೆ ಅವರವರು ಕೈಗೊಂಡ ಕಾಯಕವನ್ನೇ ಪ್ರಧಾನವಾಗಿ ಬಳಸಿರುವುದು ಗಮನಾರ್ಹವಾದುದು.

ಇಷ್ಟಲಿಂಗ ಪೂಜೆ ವರ್ಣಭೇದವನ್ನು ಹೊಡೆದು ಹಾಕಿ ಉಪಾಸನೆಗೆ ಶಕ್ತಿಯುತ ಸಾಧನವಾದರೆ, ಈ ಕಾಯಕ ನಿಷ್ಠೆ ವರ್ಗಭೇದವನ್ನು ಹೊಡೆದು ಹಾಕಿ ಕ್ರಿಯಾಶೀಲತೆಗೆ ದೈವೀ ಮಾಧ್ಯಮವಾಯಿತು. ಅಲ್ಲಿ ಕಾಯಕವೇ ಕೈಲಾಸವಾದರೆ ಇಲ್ಲಿ ಕಾಯಕವೇ ಕೈಲಾಸವಾದುದು ಅಪೂರ್ವ ಅಂಶವೇ ಸರಿ. ಈ ವಿವರಗಳನ್ನು ಪರಿಭಾವಿಸಿದರೆ ಶಿವಶರಣರು ಕಟ್ಟ ಬಯಸಿದ ಸಮಾಜ ವರ್ಗವ್ಯವಸ್ಥೆಯದಲ್ಲ ವರ್ಣವ್ಯವಸ್ಥೆಯದಲ್ಲ, ಕಾಯಕ ವ್ಯವಸ್ಥೆಯದೆಂದು ಸ್ಪಷ್ಟವಾಗಿ ಹೇಳಬಹುದು.

ಹೀಗೆ ಶಿವಶರಣರು ಕಟ್ಟಿದ ಕಾಯಕ ವ್ಯವಸ್ಥೆಯ ಸಮಾಜ ಸಮಕಾಲೀನ ಮೌಲ್ಯಗಳನ್ನು ಪ್ರತಿನಿಧಿಸುವುದರೊಂದಿಗೆ ಸರ್ವಕಾಲಿಕ ಮೌಲ್ಯವನ್ನು ಪ್ರತಿಪಾದಿಸಿದ್ದು ಅನುಪಮವಾದುದು. ಅಂದು ಹರಸಿದ ಶರಣರ ವಿಚಾರಧಾರೆ ನಿಜಕ್ಕೂ ಅನುಕರಣೀಯ, ಅಂದಿಗಿಂತ ಇಂದಿಗೆ ಹೆಚ್ಚು ಅರ್ಥಪೂರ್ಣವಾಗಿ ಅನ್ವಯವಾಗುವ ಈ ಕಾಯಕ ಮೌಲ್ಯ 'ಸಮತಾವಾದದ ಹೆಸರಿನಲ್ಲಿ ಕಾರ್ಲ ಮಾರ್ಕ್ಸನಲ್ಲಿ ಸರ್ವೋದಯದ ಹೆಸರಿನಲ್ಲಿ ಮಹಾತ್ಮ ಗಾಂಧೀಜಿಯವರಲ್ಲಿ ಅಸ್ತಿತ್ವ ಪಡೆದು ಬೆಳೆದು ಬಂದಿದೆ.

ಆಧುನಿಕ ಕಾಲದಲ್ಲಿ ನಿಂತು 12ನೆಯ ಶತಮಾನದ ಶಿವಶರಣರ ಕಾಯಕ ಮೌಲ್ಯ'ವನ್ನು ವಿವೇಚಿಸುತ್ತಾ ಹೊರಟರೆ ಬಹುಶಃ ಪೂರ್ಣವಿರಾಮವೇ ಸಿಗಲಿಕ್ಕಿಲ್ಲ. ಹೀಗಾಗಿ ಶಿವಶರಣರ ಕಾಯಕ ತತ್ವದ ಪ್ರಭಾವಕ್ಕೊಳಗಾಗಿ ತಮಗರಿಯದಂತೆ ತಮ್ಮ ಕಾಯಕವನ್ನು ಪಾಲಿಸಿ ಕಾಯಕ ನಿಷ್ಠೆಯನ್ನು ಮೆರೆದ ಹಲವಾರು ಮಹನೀಯರನ್ನು ಕುರಿತು ಸ್ವಲ್ಪದರಲ್ಲಿಯೇ ತಿಳಿದುಕೊಳ್ಳುವುದರೊಂದಿಗೆ ಕಾಯಕದ ಸ್ಪಷ್ಟ ಕಲ್ಪನೆಯನ್ನು ಅರಿಯಬಹುದಾಗಿದೆ.

ಭಾರತದ ಮಟ್ಟಿಗೆ ಹೇಳುವುದಾದರೆ 'ಬ್ರಹ್ಮ ಸಮಾಜ' ಸ್ಥಾಪಿಸುವದರ ಮೂಲಕವಾಗಿ ದಯಾನಂದ ಸರಸ್ವತಿಯವರು ಸಮಾಜದಲ್ಲಿನ ಮೌಢ್ಯತೆಗಳನ್ನು ಹೊಡೆದೋಡಿಸುವದಕ್ಕಾಗಿ ರಾಜಾರಾಮ ಮೋಹನರಾಯರು 'ಸತಿಪದ್ಧತಿ'ಯಂತಹ ಅವಹೇಳನಕರ ಪದ್ಧತಿಯನ್ನು ಹೊಡೆದೋಡಿಸುವದಕ್ಕಾಗಿ ಹೆಣಗಿದರು. ಇಂಥ ಮಹನೀಯರ ಜೊತೆ ಜೊತೆಯಲ್ಲಿ ಶ್ರೀಮತಿ ಅನಿಬೆಸೆಂಟ, ಝಾನ್ಸಿರಾಣಿ, ಲಕ್ಷ್ಮೀಭಾಯಿ ಮಹಾತ್ಮ ಗಾಂಧೀಜಿಯಂತಹ ಸ್ವಾತಂತ್ರ್ಯ ಹೋರಾಟಗಾರರು. ಸ್ವಾಮಿ ವಿವೇಕಾ-ನಂದರಂತಹ ಧರ್ಮ ದೀಪಕರು, ಸೋದರಿ ನಿವೇದಿತಾರಂತಹ ಸಂಸ್ಕೃತಿ ಪೋಷಕರು ಲಾಲ್ ಬಹದ್ದೂರ್ ಶಾಸ್ತ್ರಿಗಳಂತಹ ಆಡಳಿತಗಾರರು, ತಮ್ಮ ನಿಸ್ವಾರ್ಥ ಸೇವೆಯ ಮೂಲಕವಾಗಿ 'ಕಾಯಕ ನಿಷ್ಠೆ'ಯನ್ನು ಮೆರೆದಿದ್ದಾರೆ. ತಾವು ಕೈಗೊಂಡ ಕಾಯಕ ದಲ್ಲಿಯೇ ಪರಮಾನಂದ ಅನುಭವಿಸಿ 'ಕಾಯಕವೇ ಕೈಲಾಸ' ಎಂಬ ಮಾತಿಗೆ ಅನ್ವರ್ಥಕವಾಗಿದ್ದಾರೆ. ಇವರು ಕೈಗೊಂಡ ಕಾಯಕ ಮಾರ್ಗ ಒಬ್ಬೊಬ್ಬರದು ಒಂದೊಂದು ತೆರನಾಗಿರಬಹುದು ಆದರೆ ಕಾಯಕ ನಿಷ್ಠೆ ಮಾತ್ರ ಒಂದೇ ಎಂದು ಹೇಳಬೇಕಾಗುತ್ತದೆ. ಭಾರತದ ವೈಭವಯುತ ಇತಿಹಾಸದಲ್ಲಿ 'ಕಾಯಕ ರತ್ನ'ಗಳ ಹೊಸ ನಕ್ಷತ್ರ ಪುಂಜವೊಂದು ಉದಯವಾಯಿತು. ಅವುಗಳಿಗೆ ತನ್ನದೆಂಬ ಹೊಳಪಿದೆ ಆದರೆ ನನ್ನದೆಂಬ ಹಮ್ಮಿಲ್ಲ. ಒಂದರಿಂದ ಇನ್ನೊಂದು ಬೇರೆಯಾಗಿದೆ. ಒಂದರೊಡ ನೊಂದು ಬೆರೆತಿದೆ ಎಂದು ಬೇಕಾದರೂ ಹೇಳಬಹುದು.

ಭಾರತ ಸಂಸ್ಕೃತಿಯ ಪಡಿಯಚ್ಚಾಗಿ ನಿಂತಿರುವ ಕರ್ನಾಟಕವಂತೂ 'ಕಾಯಕವೇ ಕೈಲಾಷ' ಎಂಬ ತತ್ವದ ತವರ್ಮನೆಯಾಗಿದೆ. ಇಲ್ಲಿ ನಮಗೆ ಅನರ್ಘ್ಯವಾದ ಕಾಯಕ ರತ್ನಗಳ ಸಾಲೇ ಗೋಚರಿಸುತ್ತದೆ ಅಂತವರಲ್ಲಿ ಪ್ರಮುಖವಾಗಿ ಕಾಯಕ ಯೋಗಿ ಎಂಬ ಹೆಸರಿಗೆ ಅನ್ವರ್ಥಕವಾಗಿ ಕನ್ನಡನಾಡಿನ ಮನೆಮನೆಗಳಲ್ಲಿ ಕನ್ನಡಿಗರ ಮನಮನಗಳಲ್ಲಿ ಶ್ರೀಗಂಧ ಸುವಾಸನೆ ಬೀರಿದ ಶ್ರೀ ಮದಥಣಿಯ ಮುರುಘೇಂದ್ರ ಶಿವಯೋಗಿಗಳನ್ನು ಸ್ಮರಿಸಬಹುದು ಅವರೊಟ್ಟಿಗೆ ಅವರ ಶಿಷ್ಯ ಸಮುದಾಯದಲ್ಲಿ ಬೆಳೆದುಬಂದು ಧಾರವಾಡ ಮುರುಘಾಮಠದ ಲಿಂಗೈಕ್ಯ ಶ್ರೀ ಮೃತ್ಯುಂಜಯಪ್ಪಗಳಂತೂ 'ಕಾಯಕ' ಎಂಬ ಮಾತಿಗೆ ಮತ್ತೊಂದು ಹೆಸರಾಗಿದ್ದಾರೆ. ಒಂದು ಕಾಲಕ್ಕೆ ಹಾಳು ಬಿದ್ದ ಧಾರವಾಡದ ಹಾವೇರಿ ಪೇಟೆಗೆ ಬಂದು ನೆಲೆಸಿ ಅದನ್ನು ಪುಣ್ಯಕ್ಷೇತ್ರವನ್ನಾಗಿ ರೂಪಿಸಿದರು. ಇದಕ್ಕಿಂತ ವಿಶೇಷವಾಗಿ ಅವರು ಕೈಗೊಂಡ 'ಪ್ರಸಾದ ನಿಲಯ' ಸ್ಥಾಪನೆಯಂತಹ ಮಹತ್ವದ ಕಾರ್ಯ ಅವರ ಕರ್ತವ್ಯ ದಕ್ಷತೆಗೆ ಪ್ರತ್ಯುತ್ತರವಾಗಿ ನಿಂತಿದೆ. ಆಗತಾನೆ ಪ್ರಾರಂಭವಾದ ಕರ್ನಾಟಕ ಕಾಲೇಜಿನಲ್ಲಿ ಕಲಿಯುತ್ತಿರುವ ಬಡ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ಪ್ರತಿದಿನ ತಾವು ಬೇಡಿ ತರುತ್ತಿದ್ದ ಭಿಕ್ಷೆ-ಯಲ್ಲಿಯೇ ಪ್ರಸಾದ ನಿಲಯವೊಂದನ್ನು ಪ್ರಾರಂಭಿಸಿದರು. ಅಂದು ಕೇವಲ ಐದು

ವಿದ್ಯಾರ್ಥಿಗಳಿಂದ ಪ್ರಾರಂಭವಾದ ಶ್ರೀ ಮುರುಘರಾಜೇಂದ್ರ ಪ್ರಸಾದ ನಿಲಯ ಇಂದು ನಾಲ್ಕು ನೂರು ವಿದ್ಯಾರ್ಥಿಗಳ ಆಶ್ರಯತಾಣವಾಗಿ ಪರಿಣಮಿಸಿದೆಯಲ್ಲದೆ ಬಡತನದಲ್ಲಿ ಓದುವುದು ಸಾಧ್ಯವಿಲ್ಲವೆಂದು ಕೈಚೆಲ್ಲಿ ಕುಳಿತ ಬಡ ವಿದ್ಯಾರ್ಥಿಗಳಿಗೆ ವರದಾನವಾಗಿದೆ. ಇಷ್ಟೊಂದು ಪವಾಡ ಸದೃಶ ಕಾರ್ಯರೂಪಿಸಲು ಏನು ಕಾರಣ ಕಣ್ಣಿಗೆ ಕಾಣದ ಆ ದೇವರ ಪವಾಡವೇ ? ಅಲ್ಲ ಮೃತ್ಯುಂಜಯಪ್ಪಗಳಲ್ಲಿದ್ದ ಕಾಯಕ ನಿಷ್ಠೆಯೇ ಇದಕ್ಕೆ ಮೂಲ ಕಾರಣ ಮೃತ್ಯುಂಜಯ ಅಪ್ಪಗಳು ತಾವೇನೆ ಮಾಡಿದರು ಸರ್ವಾರ್ಪಣ ಭಾವದಿಂದ ಮಾಡುತ್ತಿದ್ದರು. ತಾವು ಮಾಡಿದ್ದೆಲ್ಲವೂ 'ಶಿವಯೋಗಿಯ ಕೃಪೆ' ಎಂಬುದು ಅವರ ಭಾವ 'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ' ಎಂಬ ಶರಣರ ಮಾತು ದಿನವೂ ಅವರು ಪಾಲಿಸುವ ಅನುಭವವಾಣಿಯಾಯಿತು. ಹೀಗಾಗಿ ತಾವು ಮಾಡುವ ಮಾಟದಲ್ಲಿಯೇ ಕೈಲಾಸ ಕಂಡುಕೊಂಡರು.

"ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಕ್ಕೆಂದು"

ಎನ್ನುವಂತಹ ಅಣ್ಣನವರ ನುಡಿಮುತ್ತು ಮೃತ್ಯುಂಜಯಪ್ಪಗಳ ನಿತ್ಯದ ಸತ್ಯ ನುಡಿಯಾಯಿತು. ಹೀಗೆ ಮರ್ತ್ಯದಲ್ಲಿಯೇ ಮಹವನ್ನು ಕಂಡುಕೊಂಡ ಮೃತ್ಯುಂಜಯಪ್ಪಗಳಲ್ಲಿ 'ಕಾಯಕವೇ ಕೈಲಾಸ' ಹೊಸ ಅರ್ಥವನ್ನೆ ಪಡೆದಿತ್ತೆಂದು ಹೇಳಬಹುದು. ಇವರು ರೂಪಿಸಿದ ಹೆದ್ದಾರಿಯಲ್ಲಿಯೇ ನಡೆದ ಇವರ ಶಿಷ್ಯರಾದ ಶ್ರೀ ಮಹಾಂತಪ್ಪಗಳೂ ಸಹ ಕಾಯಕದಲ್ಲಿಯೇ ಕೈಲಾಸ ಕಂಡುಕೊಂಡ ಮಹನೀಯ ರೊಲ್ಲೊಬ್ಬರಾಗಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಪ್ರಸ್ತುತ ಶ್ರೀಗಳಾದ ಪೂಜ್ಯ ಶಿವಯೋಗಿ ಅಪ್ಪಗಳು ಕಾಯಕದಲ್ಲಿಯೇ ಕೈಲಾಸ ಕಾಣುವ ಹವಣಿಕೆಯುಳ್ಳವ-ರಾಗಿದ್ದಾರೆ ಇದೇ ರೀತಿ ಕರ್ನಾಟಕದ ದಕ್ಷಿಣ ಭಾಗದಲ್ಲಿ ಪ್ರತಿಷ್ಠಿತ ಸಂಸ್ಥೆಯಾದ ಶ್ರೀ ಸಿದ್ಧಗಂಗಾ ಮಠವೂ ಸಹ ಪ್ರಸಾದ ನಿಲಯದಂತಹ ಮಹತ್ವಪೂರ್ಣ ಮಾಧ್ಯಮದ ಮೂಲಕವಾಗಿ ಕರ್ನಾಟಕದ ವಿಶಿಷ್ಟ ಸಂಸ್ಕೃತಿಗೆ, ಶಿವಶರಣರ ಕಾಯಕದ ಪರಿಕಲ್ಪನೆಗೆ ಮಹತ್ವದ ಕಾಣಿಕೆಯನ್ನರ್ಪಿಸಿದೆ ಎಂಬುದನ್ನು ಇಲ್ಲಿ ನೆನೆಯಬಹುದು.

ಇದೇ ರೀತಿಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ತಮ್ಮತೆ ಆದ ರೀತಿಯಲ್ಲಿ 'ಕಾಯಕ' ಕೈಗೊಂಡ ಮಹನೀಯರು ಕನ್ನಡ ನಾಡ ಇತಿಹಾಸದಲ್ಲಿ ವಿಪುಲವಾಗಿ ದೊರೆಯು-ತ್ತಾರೆ. ಅಂತವರಲ್ಲಿ ಕಾಯಕಯೋಗಿಗಳಾದ ಹರ್ಡೇಕರ್ ಮಂಜಪ್ಪನವರು, ಸರ್

ಎಂ. ವಿಶ್ವೇಶ್ವರಯ್ಯನವರು, ಡೆಪ್ಯುಟಿ ಚೆನ್ನಬಸಪ್ಪನವರು, ಆಲೂರ ವೆಂಕಟರಾಯರು ಸರ್. ಸಿದ್ದಪ್ಪ ಕಂಬಳಿಯವರು, ಗಂಗಾಧರ ಮಡಿವಾಳೇಶ್ವರ ತೂರಮರಿಯವರು, ಗಳಗನಾಥರು, ಇನ್ನೂ ಅನೇಕ ಮಹನೀಯರು "ಪರೋಪಕಾರಾರ್ಥಂ ಇದಂ ಶರೀರಂ" ಎಂಬ ನಿಷ್ಠೆಯಿಂದ ಸೇವೆಗೈದು ತಾವು ಕೈಗೊಂಡ ಕಾಯಕದಲ್ಲಿ ಪರಮಾನಂದ ಪಡೆಯುವದರೊಂದಿಗೆ ಕಾಯಕಕ್ಕೆ ಕೈಲಾಸ ಎಂಬ ಹೊಸ ಅರ್ಥ ಜೋಡಿಸಿದರು

ಇತ್ತೀಚಿನ ದಿನಗಳಲ್ಲಿ ಕಾಯಕ ಮೌಲ್ಯ ತನ್ನ ಅರ್ಥವನ್ನು ಕಳೆದುಕೊಂಡು ಕಳಾಹೀನವಾಗುತ್ತಲಿದೆಯೇನೋ ಎಂದೆನ್ನಿಸತೊಡಗಿದೆ. ಅಸಂಗ್ರಹವೇ ಗುರಿಯಾಗಿದ್ದುಕೊಂಡು. ಮಾಡುವ ಕಾಯಕದಲ್ಲಿ ನಿಷ್ಠೆ ಇರಿಸಿ ಮಾಡುವ ದಾಸೋಹ ಭಾವದ ಮಾಟವೇ 'ಕಾಯಕ" ಎಂಬರ್ಥ ಪಡೆದಿದ್ದರೂ, ಇತ್ತೀತ್ತಲಾಗಿ ಸಂಗ್ರಹವೇ ಜೀವನದ ಮೌಲ್ಯವಾಗಿ ನಿಂತಿದೆ. ಇಂಥ ವಿಪರ್ಯಾಸ ಸ್ಥಿತಿಯಲ್ಲಿಯೂ ಅಲ್ಲೊಬ್ಬರು ಇಲ್ಲೊಬ್ಬರಂತೆ ಕಾಯಕ ನಿಷ್ಠರು ಸಿಗುತ್ತಾರಲ್ಲ ಎಂದು ತೃಪ್ತಿಪಡಬೇಕಾಗಿದೆ, ದೇಶದ ಇಂದಿನ ದುಸ್ಥಿತಿಯ ಹಿನ್ನೆಲೆಯಲ್ಲಂತೂ ಕಾಯಕ ಮೌಲ್ಯದ ಮಹತ್ವ ಇನ್ನೂ ಎದ್ದು ಕಾಣುತ್ತದೆ. 'ಉರಿಯುವ ಮನೆಯಲ್ಲಿ ಹಿರಿದದ್ದೆ ಲಾಭ' ಎಂಬಂತೆ ಸಿಕ್ಕಷ್ಟು ಸಿಗಲಿ ಎಂದು ಹಣ ಸಂಪಾದನೆಯಲ್ಲಿ ತೊಡಗಿದ ಇಂದಿನ ಜನತೆಗೆ ಹಣವೇ ಜೀವನಾಧಾರವಾಗಿ ಇಂದಿನ ಜನಾಂಗದಲ್ಲಿ ದಿನದಿಂದ ದಿನಕ್ಕೆ ಬೆಳೆಯುತ್ತಿರುವ ವೈಷಮ್ಯ, ಕೊಲೆ, ಸುಲಿಗೆ, ದರೋಡೆಗಳು ಶರಣತತ್ವಕ್ಕೆ ವಿರುದ್ಧವಾಗಿಯೇ ಮುನ್ನಡೆದಿವೆ. ಅಸಂಗ್ರಹದ ಮಹತ್ವವನ್ನು ಶರಣರು ಸಾರಿದ್ದರೂ, ಇಂದೂ ಸಂಗ್ರಹವೇ ಮೌಲ್ಯವಾಗಿ ನಿಂತಿದೆ. ಯಾರಲ್ಲಿ ಸಂಪತ್ತಿದೆಯೋ ಆತನಿಗೆ ಬೆಲೆಯಿದೆ. ಇಂದಿನ ಸಮಾಜದಲ್ಲಿ ಇಂತಹ ಸಂದಿಗ್ಧದಲ್ಲಿ ನಮಗೆ ದಾರಿದೀಪವಾಗಿ ನಿಲ್ಲಬಲ್ಲವಂತಹ ಏಕಮೇವ ಮೌಲ್ಯವೆಂದರೆ ಎಂಟುನೂರು ವರ್ಷಗಳಷ್ಟು ಹಿಂದೆಯೇ ಶಿವಶರಣರು ಪ್ರತಿಪಾದಿಸಿದ "ಕಾಯಕ ಮೌಲ್ಯ". ಇಂಥ "ಕಾಯಕವೇ ಕೈಲಾಸ'' ನಮ್ಮೆಲ್ಲರ ದಾರಿದೀಪವಾಗಿರಲಿ ಬಾಳ ಬುತ್ತಿಯಾಗಿರಲಿ. ●

"ಜೈ ಕರ್ನಾಟಕ"



## (ಚಿಂತನ) ಮನಸ್ಸನ್ನು ನಿಗ್ರಹಿಸಿಕೊಳ್ಳಿ

–ಪ॥ ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಜ್ಜನ ದಕ್ಷಿಣ ಕನ್ನಡ

ದುಃಖೇಷ್ವನುದ್ವಿಗ್ನಮನಾಃ ಸುಖೇತು ವಿಗತಸ್ಪೃಹಾ! ವೀತರಾಗ ಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ಎಂದು ಭಗವದ್ಗೀತೆ ಹೇಳಿದೆ. ಸುಖದಲ್ಲಿ ಅತಿ ಸಂತಸ ಗೊಳ್ಳದೆ ದುಃಖ ಬಂದಾಗ ಉದ್ವಿಗ್ನನಾಗದೆ ಎರಡನ್ನು ಸಮಚಿತ್ತದಿಂದ ಸ್ವೀಕರಿಸು ವವನು, ರಾಗ ದ್ವೇಷಗಳಿಗೆ ಒಳಗಾಗದವನು ಮುನಿಯು ಎಂದು ಅದರ ತಾತ್ಪರ್ಯ. ಈ ಯಂತ್ರಯುಗದಲ್ಲಿ ಎಷ್ಟು ಮಂದಿ ಹಾಗೆ ಬದುಕುತ್ತಿದ್ದಾರೆ? ಅಲ್ಪ ಸಂತಾನಕ್ಕಾಗಿ ಹೆಣಗಾಡುವ ಮಂದಿ ತಮ್ಮ ಆನಂದಕ್ಕಾಗಿ ಇನ್ನೊಬ್ಬರ ಕತ್ತು ಹಿಸುಕಲು ಹೇಸು-ವುದಿಲ್ಲ. ಒಂದಂಕಿ ಲಾಟರಿಯಲ್ಲ ಬಹುಮಾನ ಬರಲಿಲ್ಲವೆಂದು ಪರಿತಪಿಸುವವರು ಅದೆಷ್ಟುಮಂದಿ! ನಲ್ಲಿ ನೀರಿಗಾಗಿ, ಬಸ್ಸಿನಲ್ಲಿ ಸೀಟಿಗಾಗಿ ಇನ್ನೇನೋ ಅತೀ ಅಲ್ಪ ಕಾರಣಕ್ಕಾಗಿ ಕಾಲು ಕೆದರಿ ಜಗಳಾಡುವ ಮಂದಿ ರಾಗದ್ವೇಷಗಳನ್ನು ಗೆಲ್ಲಬಲ್ಲರೆ?

ಮನ ಏವ ಮನುಷ್ಯಾಣಾಂ ಅಲ್ಲವೆ? ಎಲ್ಲದಕ್ಕೂ ಕಾರಣ ನಮ್ಮ ಮನಸ್ಸು ಚಿತ್ತವೆಂಬ ಹುಚ್ಚು ಕುದುರೆಗೆ ಕಡಿವಾಣ ಹಾಕಿ ತಡೆದು ನಿಲ್ಲಿಸಲಾಗದವನು ಬೇರೆ ಬೇರೆ ಅಂಗಗಳು ಎಸಗುವ ಅಪರಾಧವನ್ನು ನಿಯಂತ್ರಿಸಲಾರ. ಹೊಂಗಿಟ್ಟ ಚಪ್ಪಲಿ ಯನ್ನು ಯಾರು ಕದ್ದೊಯ್ದರೊ? ಎಂದು. ಮನಸ್ಸಿನಲ್ಲಿ ಆಲೋಚಿಸದ ಸ್ತ್ರೀ ಪುರುಷರೆ ಇಲ್ಲವೆಂಬ ಮಾತಿದೆ. ಹುಚ್ಚು ಮನಸ್ಸು ಅನ್ಯ ಸ್ತ್ರೀ ಪುರುಷರ ಒಳಸೌಂದರ್ಯದ ಕಲ್ಪನೆ ಮಾಡುತ್ತಾ ಅವರೊಂದಿಗೆ ತಾನು ಸುಖಿಸಿದಂತೆ ಭ್ರಮಿಸುತ್ತದೆ. ಈ ಮಾನಸಿಕ ವ್ಯಭಿಚಾರ ಮಾಡಬಲ್ಲ ಮನಸ್ಸನ್ನು ಹತೋಟಿಗೆ ತರದಿದ್ದರೆ ರಾಗ ದ್ವೇಷಗಳನ್ನು ಗೆಲ್ಲುವುದುಹೇಗೆ?

ಶಿಷ್ಯರಿಬ್ಬರು ರಾತ್ರೆ ದೂರದ ಊರಿಗೆ ನಡೆದಾಗ ಇದ್ದಕ್ಕಿದ್ದಂತೆಯೇ ಭಾರೀ ಮಳೆ ಬಂದಿತು. ಮಳೆಯಿಂದ ಪಾರಾಗಲು ಒಬ್ಬ ಶಿಷ್ಯ ಓಡುತ್ತಾ ವಾರಾಂಗನೆಯೊಬ್ಬಳ ಮನೆ ಸೇರಿಕೊಂಡ. ಇನ್ನೊಬ್ಬ ಶಿಷ್ಯ ದೇವರ ಗುಡಿ ಸೇರಿಕೊಂಡ. ಅಲ್ಲಿ ಹಲವಾರು ಭಕ್ತರು ಸೇರಿ ಸಂಭ್ರಮದ ಉತ್ಸವ ನಡೆಸಿದ್ದರು. ಆದರೆ ಅವನ ಮನ ಮಾತ್ರ ಅದರಲ್ಲಿ ನೆಡಲಿಲ್ಲ ಆತ ವಾರಾಂಗನೆಯ ದೇಹ ಸೌಂದರ್ಯವನ್ನೇ ಕಲ್ಪಿಸುತ್ತಿದ್ದ. ಅಲ್ಲಿಗೆ ಹೋದ ತನ್ನ ಗೆಳೆಯ ಪಡಬಹುದಾದ ದೇಹ ಸುಖವನ್ನೆಣಿಸಿ ಕರುಬುತ್ತಿದ್ದ. ಆದರೆ ವಾರಾಂಗನೆಯ ಮನೆಯಲ್ಲಿದ್ದ ಶಿಷ್ಯ ಅವಳತ್ತ ತಲೆಯೆತ್ತಿ ನೋಡದೆ ದೇವರ ಗುಡಿಯಲ್ಲಿರುವ ತನ್ನ ಗೆಳೆಯನಿಗೆ ಲಭಿಸುವ ಪುಣ್ಯವನ್ನೆ ಎಣಿಸಿ ಹಾಕುತ್ತಿದ್ದ. ಅದ್ದರಿಂದ ಅವನಿಗೆ ಸ್ವರ್ಗವೂ ದೇವರ ಗುಡಿಯಲ್ಲಿದ್ದವನಿಗೆ ನರಕವೂ ಸಿಕ್ಕಿದಂತೆ ಚಿತ್ತವಿಲ್ಲದೆ ಗುಡಿಯ ಸುತ್ತಿದರೆ ಫಲವೇನು ಎತ್ತು ಗಾಣವ ಸುತ್ತಿದಂತಲ್ಲವೆ.?

ಮನಸ್ಸು ಪರಿಶುದ್ಧವಿದ್ದರೆ ನಾವು ಪರಿಶುದ್ಧರಾಗುವುದಲ್ಲದೆ ಇನ್ನೊಬ್ಬರಲ್ಲೂ ಲೋಪ ದೋಷಗಳನ್ನು ಕಾಣಲಾರೆವು. ವೈದ್ಯಶಾಸ್ತ್ರವು ಕೂಡ ಅನೇಕ ವ್ಯಾಧಿಗಳಿಗೆ ಮನಸ್ಸೇಕಾರಣ ಎನ್ನುತ್ತದೆ. ಕರುಳಿನ ರೋಗಗಳು, ಲೈಂಗಿಕ ಅಸಾಮರ್ಥ್ಯ, ಇನ್ನಿತರೆ

ಹಲವು ಬಾಯಿಲೆಗಳು ಮನಸ್ಸಿನ ವಿಕಲ್ಪದಿಂದ ಉಂಟಾಗುತ್ತವೆಂಬುದು ಕಟುಸತ್ಯ. ಮನುಷ್ಯ ಚಿಂತನೆಗೆ ವಶನಾಗುವುದು ದೈಹಿಕ ವ್ಯಾಪಾರವು ಕೆಡಲು ಕಾರಣವಾಗುತ್ತದೆ. ಮನಸ್ಸಿನಲ್ಲಿ ಕಲ್ಮಶವಿರುವ ವ್ಯಕ್ತಿಗೆ ಹಗೆಗಳು ಜಾಸ್ತಿ. ಏಕೆಂದರೆ ತನ್ನ ಪರಿಸರದ ಮಂದಿಯಲ್ಲಿ ನ್ಯೂನತೆಗಳನ್ನೇ ಕಾಣುತ್ತದೆ ಮನಸ್ಸು. ಆದರಿಂದ ರಾಗ ದ್ವೇಷಗಳುಂಟಾಗುತ್ತವೆ. ಜಗಳದ ಬೆಂಕಿ ಹತ್ತಿಕೊಳ್ಳುತ್ತದೆ. ದುರಂತಗಳು ಸಂಭವಿಸುತ್ತವೆ.

ಏಕಾಗ್ರ ಚಿತ್ತವನ್ನು ಸಾಧಿಸಿಕೊಂಡವನು ಜಗತ್ತಿನಲ್ಲಿ ಬಹು ದೊಡ್ಡ ಗೆಲುವನ್ನು ಪಡೆದಂತೆ. ಈ ಜಗತ್ತಿನ ಎಲ್ಲ ವ್ಯಾಪಾರಕ್ಕೂ ಮೂಲ ಕಾರಣವಾದ ಒಂದು ಶಕ್ತಿ ನಮ್ಮ ಕಣ್ಣಿಗೆ ಕಾಣಿಸಿಕೊಳ್ಳದಿದ್ದರೂ ಇದೆ ಎಂದು ಒಪ್ಪುವುದು ಅನಿವಾರ್ಯ ಒಳತಿಗೂ ಕೆಡುಕಿಗೂ ಅದೇ ಕಾರಣವೆಂದು ಆರೋಪಿಸಿ, ಉತ್ತಮ ಪಥದಲ್ಲಿ ಪ್ರಯತ್ನವನ್ನು ಮುಂದುವರಿಸುವುದರಿಂದ ನಮ್ಮ ಕೆಡಕಿಗೆ ಕಾರಣರಾದವರ ತಪ್ಪುಗೆಗಳನ್ನು ಕ್ಷಮಿಸುವುದರಿಂದ ಮನಸ್ಸಿಗೆ ಕಡಿವಾಣವನ್ನು ಹಾಕಲು ಸಾಧ್ಯವಿದೆ.

ದೇವರ ಮಗನಾದ ಯೇಸುವು ಒಂದು ಸಲ ಕೆಲವು ಮಂದಿ ಯುವಕರು ತರುಣಿಯೊಬ್ಬಳನ್ನು ಮರಕ್ಕೆ ಕಟ್ಟಿ ಹಾಕಿ ಕಲ್ಲು ಹೊಡೆದು ಕೊಲ್ಲಲು ಸಜ್ಜಾಗಿರುವುದನ್ನು ನೋಡಿದ. ಅವಳಿಗೆ ಯಾಕೆ ಈಶಿಕ್ಷೆ ಎಂದು ವಿಚಾರಿಸಿದ. ಅವಳು ವ್ಯಭಿಚಾರ ಮಾಡಿರುವುದರಿಂದ ಆ ತಪ್ಪಿಗಾಗಿ ಅವಳನ್ನು ಕೊಲ್ಲುತ್ತಿದ್ದೇವೆಂದು ಅವರು ಉತ್ತರಿಸಿದರು ಯೇಸುವು, "ಸರಿ ತಪ್ಪುಮಾಡಿದವರು ಈ ಶಿಕ್ಷೆ ವಿಧಿಸಲೇಬೇಕು. ಆದರೆ ಈ ವರೆಗೆ ಒಂದೇ ಒಂದು ತಪ್ಪನ್ನು ಮಾಡದವನು ಅವಳಿಗೆ ಮೊದಲನೆಯ ಕಲ್ಲನ್ನು ಹೊಡೆಯಲಿ. ಅನಂತರ ಉಳಿದವರು ಕಲ್ಲು ಹೊಡೆದು ಬಿಡಿ ಎಂದನು. ಯೋಚಿಸಿದಾಗ ಒಂದು ತಪ್ಪನ್ನು ಮಾಡದವನು ಯಾರು ಇರಲಿಲ್ಲ.

ಇನ್ನೊಬ್ಬರು ಮಾಡಿದ ತಪ್ಪಿಗಾಗಿ ಅವರನ್ನು ದ್ವೇಷಿಸುವ ಮುನ್ನ ಆತ್ಮ ವಿಮರ್ಶೆ ಮಾಡಿಕೊಳ್ಳಬೇಕು. ಅವರನ್ನು ಕ್ಷಮಿಸಬೇಕು, ನಮ್ಮನ್ನು ತಿದ್ದಿಕೊಳ್ಳಬೇಕು. ಸಹನೆ, ಕ್ಷಮಾಶೀಲತೆಗಳು ದೌರ್ಬಲ್ಯದ ಲಕ್ಷಣಗಳಲ್ಲ. ಜಗತ್ತನ್ನೇ ಗೆಲ್ಲಬಲ್ಲ ಅಸ್ತ್ರಗಳವು. ಇವೆರಡು ಗುಣಗಳು ನಿಮ್ಮಲ್ಲಿದ್ದರೆ ಕೋಪ ಬರುವುದಿಲ್ಲ. ಕೋಪ ಬಾರದ ದ್ವೇಷ ಹುಟ್ಟುವುದಿಲ್ಲ. ದ್ವೇಷ ಇಲ್ಲದ ಮನಸ್ಸು ಕಲುಷಿತಗೊಳ್ಳುವುದಿಲ್ಲ.

ಚಿತ್ತ ಚಾಂಚಲ್ಯವನ್ನು ಮನುಷ್ಯಗೆದ್ದಾಗ ಈ ಅತ್ಯಾಚಾರ ಅನಾಚಾರಗಳಾಗಲೀ ಜಗತ್ತನ್ನೇ ದಳ್ಳುರಿಯಲ್ಲಿ ಬೇಯಿಸುವ ಕಲಹಗಳಾಗಲೀ ಸಂಭವಿಸಲು ಆಸ್ಪದವಿಲ್ಲ. ದೈಹಿಕ ರೋಗಗಳಿಗೆ ಮನೋವಿಕಲ್ಪ ಹೇಗೆ ಮೂಲವೋ ಮಾನವನ ಮಧುರ ಸಂಬಂಧವನ್ನು ಕೆಡಿಸುವ ವ್ಯಾಧಿಗಳಿಗೂ ಅದೇ ಮೂಲ. ಮನವೆಂಬ ಮರ್ಕಟನನ್ನು ತಹಬಂದಿಗೆ ತರಬೇಕು. ಮನಸ್ಸು ತಿಳಿಗೊಳವಾಗಬೇಕು, ಅದು ತಿಳಿವಿನ ಕೊಳವೂ ಆಗಬೇಕು. ಹಾಗಾದಾಗ ಎಲ್ಲರನ್ನು ಪ್ರೀತಿಸುವ ವಿಶಾಲವಾದ ಭಾವನೆಯು ಅಲ್ಲಿ ಉತ್ಪನ್ನಗೊಳ್ಳುವುದು. ಮನಸ್ಸು ಪರಿಶುದ್ಧಗೊಂಡು ಏಕಾಗ್ರತೆಗೊಳ್ಳಲು ಧ್ಯಾನವೊಂದೇ ಸಾಧನವೆಂದು ಬಲ್ಲವರು ಹೇಳಿದ್ದಾರೆ. ಆಧ್ಯಾತ್ಮ ಸಾಧನೆಯಲ್ಲಿ ವಿಕೇಂದ್ರೀಕರಣಗೊಂಡರೆ ಅಂತಹ ಶಕ್ತಿಯನ್ನು ಸಂಪಾದಿಸಲು ಸಾಧ್ಯ. ಆ ಸಾಧ್ಯತೆ ನಮ್ಮ ಮನೋಬಲದಲ್ಲಿ ಅಡಗಿದೆ.

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

# ಹರಿಹರನ ಕಾವ್ಯ ಕಥೆಗಳು-ಒಂದು

-ಡಾ|| ಬಸವರಾಜಮಲಶೆಟ್ಟಿ, ವಿಜಯನಗರ ಕಾಲೇಜು, ಹೊಸಪೇಟೆ, ಬಳ್ಳಾರಿ ಜಿಲ್ಲೆ.

**ತಿರುನೀಲಕಂಠ :-** ವರ್ಣಿಸಲಸದಳವಾದ ವೈಭವದಿಂದ ಚೋಳದೇಶವು ಧರಾತಳದಲ್ಲಿ ಮೆರೆಯುತ್ತಿತ್ತು. ಲೋಕಪಾವನೆಯೆನಿಸಿದ ಕಾವೇರಿ ನದಿ, ಸ್ವರ್ಗವನ್ನು ಹೀಗಳೆಯುವ ನಗರಗಳು, ವಿಪುಲವಾಗಿರುವ ಶಿವಭವನಗಳು, ಶೋಭಿಸುವ ತಿರುನಾಳ್ಗಳು, ಸರ್ವದೆಸೆಗೆ ಹರಿವ ಕಾಲುವೆಗಳು, ಸರ್ವ ಋತುಗಳಲ್ಲಿಯೂ ಮುದನೀಡುವ ಬನಗಳು, ಸಮೃದ್ಧವಾದ ಕಬ್ಬು-ಬತ್ತದ ಹೊಲಗಳು, ತಲೆವಾಲನುಂಡು ಬೆಳೆಯುವ ಅರಗಿಳಿಗಳು, ಇನಿದನಿಗೊಡುವ ಕೋಗಿಲೆ, ಝೇಂಕರಿಸುವ ದುಂಬಿ, ತುಂಬಿದ ಕೊಳಗಳಲ್ಲಿ ನಲಿವ ಹಂಸಗಳು-ಆ ಚೋಳದೇಶದೊಳಗೆ ಒಪ್ಪುತ್ತಿದ್ದವು.

ಅಂಥ ಚೋಳದೇಶದೊಳಗೆ ಪೊನ್ನಾಂಬಲ ಎಂಬ ನಗರವು ಶಿವಪುರವೆಂಬಂತೆ ಮೆರೆಯುತ್ತಿತ್ತು. ಸದಾಕಾಲ ಶಿವನು ನೆಲೆಸಿರುವ ಆ ಪುರಕ್ಕೆ ಶಿವನಿಷ್ಠೆಯೇ ಕೋಟೆ, ಶಿವಭಕ್ತಿಯೇ ಕಾವಲು, ಸದಾಚಾರಗಳೇ ಆಳವಾದ ಅಗಳ್ತೆಗಳು ಶಿವನಾಮವೇ ಬಿರುದಿನ ಅಟ್ಟಣೆ, ಶಿವಪುರಾಣಗಳೇ ಮಹಾದ್ವಾರಗಳಾಗಿದ್ದವು ಅಲ್ಲಿ ಸೋಮಬೀದಿ, ಸೂರ್ಯಬೀದಿ, ಶಿವಬೀದಿ, ಹರಬೀದಿಗಳಿದ್ದವು. ಕಂತುಹರನು ವಾಸವಾಗಿರುವ ಸೆಜ್ಜೆಮನೆಯಂತೆ ಎಸೆವ ಆ ನಗರವೆಲ್ಲ ಶಿವಮಯವಾಗಿತ್ತು. ಅಲ್ಲಿಯ ಕೇರಿಗಳ ತುಂಬ ಶಿವಭಕ್ತರು, ಮನೆ.ಮನೆಗಳಲ್ಲಿ ಶಿವಪೂಜಾ ಸಂಭ್ರಮ. ಶಶಿಧರನು ಕರುಣೆಯಿಂದ ಅಲ್ಲಿ ನಾಟ್ಯವಾಡುತ್ತಿದ್ದನು. ಕೈಲಾಸ ಮತ್ತು ಮೇರು ಪರ್ವತಗಳು ಆ ಪಟ್ಟಣದ ಮಹಿಮೆಗೆ ಮತ್ಸರಪಡುತ್ತಿದ್ದವು.

ಇಂತಿರುವ ಪೊನ್ನಾಂಬಲ ಪಟ್ಟಣದಲ್ಲಿ ತಿರುನೀಲ ಕಂಠನೆಂಬ ಶಿವಭಕನಿದ್ದನು. ಅವನ ಮಡದಿಯ ಹೆಸರು ಮುತ್ತೈದೆ. ಅವರಿಗೆ ಹದಿನಾರರ ಹರಯ. ಅಂಥ ತುಂಬಿ ತುಳುಕುವ ಯೌವ್ವನದಲ್ಲಿ ಅವರ ಸ್ವಭಾವ ನಡವಳಿಕೆಗಳು ವಿಶೇಷವಾಗಿದ್ದವು. ಅವರಿಬ್ಬರ ಮನದೊಳಗೆ ಶಿವಭಕ್ತಿಯಲ್ಲದೆ ಮತ್ತೇನೂ ಇರಲಿಲ್ಲ. ತನ್ನ ನಿರ್ಮಲವಾದ ನಡೆ ನುಡಿಗಳಿಂದಾಗಿ ತಿರುನೀಲಕಂಠನು ಆ ಪುರದ ಶಿವನೆಂದೆನಿಸಿದ್ದನು. ಒಂದು ದಿನ ಅವನು ನಿತ್ಯದಂತೆ ಲಿಂಗಾರ್ಚನೆಗೆ ಸಂತೋಷಭರಿತನಾಗಿ ಶಿವಾಲಯಕ್ಕೆ ಹೊರಟನು ಭಸ್ಮ ರುದ್ರಾಕ್ಷಿಗಳಿಂದ ಶೋಭಿತನಾಗಿ ಶಿವಸ್ಮರಣೆ ಮಾಡುತ್ತಾ ಬರುವಾಗ ಅಲ್ಲಲ್ಲಿ ಕಿವಿಗೆ ಬೀಳುವ ಶಿವಪುರಾಣಗಳನ್ನು ಕೇಳಿ ಭಕ್ತಿಯ ಆಧಿಕ್ಯದಿಂದ ಪುಳಕಿತನಾಗುತ್ತಿದ್ದನು. ಆನಂದಾಶ್ರುಗಳು ಸೂಸುತ್ತಿದ್ದವು. ಭಕ್ತಿಯ ತನ್ಮಯತೆಯಿಂದ ಮೈಮರೆಯುತ್ತಿದ್ದನು. ಮತ್ತೆ ಎಚ್ಚರಗೊಂಡು ಮೆಲ್ಲಡಿಯಿಡುತ್ತ ನಡೆಯುತ್ತಿದ್ದನು.

ತಿರುನೀಲಕಂಠನು ಪೊನ್ನಾಂಬಲೇಶನ ದೇವಾಲಯಕ್ಕೆ ಬಂದು ರಂಗಮಂಟಪದಲ್ಲಿ ಕೈಮುಗಿದು ನಿಂತನು. ಶಿವಲಿಂಗದ ಸಮೀಪ ಹೋಗಿ ನಾನಾ ವಿಧದಲ್ಲಿ ಪೂಜಿಸಲು ಪ್ರಾರಂಭಿಸಿದನು. ಹೂವಿನಿಂದೊಮ್ಮೆ, ಹೊಸ ಪುಳಕದಿಂದೊಮ್ಮೆ, ಭಾವದಿಂದೊಮ್ಮೆ, ಆನಂದಾಶ್ರುಗಳಿಂದೊಮ್ಮೆ ಪೂಜಿಸುತ್ತ ಅವನು ಭಾವಪರವಶನಾಗುತ್ತಾನೆ. ಆಗ ಶಿವಸ್ತುತಿಯ ನುಡಿಗಳು ನಿಧಾನವಾಗಿ ಕಡಿಮೆಯಾಗಿ ಮೌನದ ಸ್ಥಿತಿ ನೆಲೆಗೊಳ್ಳುತ್ತದೆ. ಭಕ್ತಿಯ ಉದ್ವೇಗದಲ್ಲಿ ತಿರುನೀಲಕಂಠನಿಗೆ ಪೂಜಾಕ್ರಮಗಳು ಮರೆತು ಹೋಗುತ್ತವೆ. ಹೇಗೆ ಹೇಗೋ ಪೂಜಿಸುತ್ತ ಗದ್ಗದಿತೆಗಳಿಂದ ಶಿವನನ್ನು ಹೊಗಳುತ್ತ ಶಿವಲಿಂಗವನ್ನು ಮುಟ್ಟಿ ಮುಟ್ಟಿ ಆನಂದಿಸುತ್ತ ಭಕ್ತಿಯ ಉನ್ಮಾದ ಸ್ಥಿತಿಯಲ್ಲಿ ಕುಣಿದಾಡುತ್ತಾನೆ. ಏನೆನ್ನ ಪೊನ್ನಾಂಬಲದ ನಲವೇ ಏನೆನ್ನ ಶಂಕರನೇ ಏನೆನ್ನ ಶಶಿಧರನೇ ಎಂದು ಕೊಂಡಾಡಿ ಅಪ್ಪಿಕೊಂಡು ಕರಗಿಹೋಗುವನು. ಹೀಗೆ ಮಧ್ಯರಾತ್ರಿಯವರೆಗೆ ಶಿವಪೂಜೆಯಲ್ಲಿ ನಿರತನಾದ ತಿರುನೀಲಕಂಠನು ಮನಸ್ಸಿಲ್ಲದ ಮನಸ್ಸಿನಿಂದ ಶಿವಲಿಂಗವನ್ನು ಬೀಳ್ಕೊಟ್ಟು ಮನೆಗೆ ಹೊರಡುತ್ತಾನೆ.

ಶಿವಾಲಯದ ದೇವದಾಸಿಯೊಬ್ಬಳು ಉಪ್ಪರಿಗೆಯ ಮೇಲಿಂದ ಪರಿಯಾಣ ತೊಳೆದ ಎಂಜಲು ನೀರನ್ನು ಕೆಳಗೆ ಚೆಲ್ಲಿದಳು. ಆ ನೀರು ಓಣಿಯಲ್ಲಿ ಹಾಯ್ದು ಹೋಗುತ್ತಿದ್ದ ತಿರುನೀಲಕಂಠನ ಮೇಲೆ ಬಿದ್ದಿತು. ತನ್ನ ತಪ್ಪಿನ ಅರಿವಾಗಿ ಅವಳು ಗಾಬರಿಗೊಂಡಳು. ಓಡಿ ಬಂದು ತಿರುನೀಲಕಂಠನ ಪಾದಗಳಮೇಲೆ ಬಿದ್ದು ಈ ಸರ್ವಾಪರಾಧಿಯ ಮೇಲೆ ಕರುಣೆತೋರಬೇಕೆಂದು ಬೇಡಿಕೊಂಡಳು. ಅವನನ್ನು ತನ್ನ ಮನೆಗೆ ಕರೆದೊಯ್ದು ಪರಿಮಳೋದಕದಿಂದ ಸ್ನಾನಮಾಡಿಸಿ ದಿವ್ಯ ಗಂಧಗಳನ್ನು ಲೇಪಿಸಿ ದುಕೂಲವನ್ನುಡಿಸಿ ಮುಡಿಯಲ್ಲಿ ಹೂಗಳನ್ನಿಡಿಸಿ ಕಪ್ಪುರದ ವೀಳ್ಯ ಕೊಟ್ಟು ತಪ್ಪನ್ನು ಮರೆಯಬೇಕೆಂದು ಮತ್ತೊಮ್ಮೆ ಭಕ್ತಿಯಿಂದ ಪೊಡಮಟ್ಟು ಗೌರವಾದರಗಳೊಂದಿಗೆ ಬೀಳ್ಕೊಟ್ಟಳು. ಶಿವಭಕ್ತಿಯ ಉನ್ಮಾದದಲ್ಲಿದ್ದ ತಿರುನೀಲಕಂಠನು ಇದಾವುದನ್ನು ಗಮನಿಸದೆ ಮನೆಗೆ ಬಂದನು.

ಎಂದಿನಂತಲ್ಲದ ಹೊಸಕಂಪು ಮನೆಯೊಳಗೆ ಪಸರಿಸಿತು. ತಿರುನೀಲಕಂಠನ ಮಡದಿ ಮುತ್ತೈದೆ ಸಂಶಯದಿಂದ ದಿಗಿಲುಗೊಂಡು ಮನದೊಳಗೇ ಮುನಿದು ಸಿಡಿಮಿಡಿಗೊಂಡಳು. ಬಾಯಿಬಿಟ್ಟು ಹೇಳಲಾರದ ಸಂಕಟವನ್ನು ಒಳಗೊಳಗೇ ನುಂಗಿಕೊಂಡು ಕೊರಗುತ್ತಾಳೆ. ನೋಟದೊಳಗೆ ಮುನಿಸನ್ನು ಮೌನದೊಳಗೆ ಮಾತನ್ನು ಪ್ರೀತಿಯಲ್ಲಿ ಕೋಪವನ್ನು ಮನದಲ್ಲಿ ಚಿಂತೆಯನ್ನು ದೇಹದಲ್ಲಿ ಬಿಸುಪನ್ನು ಅಡಗಿಸಿಟ್ಟುಕೊಂಡು ಮಾಮೂಲಿನಂತೆ ಪತಿಯ ಕಾಲ್ತೊಳೆದು ಊಟಕ್ಕೆ ಎಡೆ ಮಾಡಿದಳು. ನಂತರ ಸಿರಿಮಂಚದ ಮೇಲೆ ಗಂಡನ ಪಕ್ಕಕ್ಕೆ ಬಾಡಿದ ಲತೆಯಂತೆ ಮಲಗಿಕೊಂಡಳು. ತಿರುನೀಲಕಂಠನು ಕಾಮಾನುರಾಗದಿಂದ ತನ್ನ ಮಡದಿಯಮೇಲೆ

ಕೈಯಿಡಲು ಅವಳು ಸಿಡಿಮಿಡಿಗೊಂಡು 'ಮುಟ್ಟಬೇಡ ಶಿವನಾಣೆ' ಎನ್ನುತ್ತ ಗಂಡನ ಕೈಯನ್ನು ನೂಕಿದಳು. ಎಂದೂ ಕೇಳದ ಮಾತುಕೇಳಿ ಅವನು ಹೌಹಾರಿ ಕುಳಿತನು. ಶಿವನಾಣೆಯ ಮಾತು ಅಲಗಿನಂತೆ ಅವನ ಕಿವಿಗಳಲ್ಲಿ ನಟ್ಟಿತು. ಅಳುಕಿ ಬಳುಕಿ ಕುದಿದು ಕೊರಟಲೆಗೊಂಡನು. ಆ ಶಿವನಾಣೆ ಅವರಿಬ್ಬರ ದೇಹದೊಳಗೆ ಹೊಕ್ಕು ಬೆಳೆಯಿತು. ಅಂದಿನಿಂದ ಮೊದಲಾಗಿ ಅವರು ಒಬ್ಬರನ್ನೊಬ್ಬರು ಸೋಂಕದೆ ಜೀವಿಸಿದರು. ಈ ವಿಷಯ ಅವರಿಗೆ ಹಾಗೂ ಈಶ್ವರನಿಗೆ ಮಾತ್ರ ಗೊತ್ತು. ಆ ಭಕ್ತ ದಂಪತಿಗಳ ನಿಜ ಸ್ಥಿತಿಯನ್ನು ಧರೆಯೊಳಗಾರೂ ಅರಿಯರು.

ತಿರುನೀಲಕಂಠ ಮುತ್ತೈದೆಯರು ಶಿವನಾಣೆಯನ್ನು ಚಿತ್ತದಲ್ಲಿ ಧೃಢವಾಗಿಟ್ಟು ಕೊಂಡು ಶರಣರ ಸೇವೆಮಾಡುತ್ತ ಹರಭಕ್ತರೇ ತಮಗೆ ತಂದೆ ತಾಯಿ ಬಂಧು ಬಳಗ ವೆಂದು ಭಾವಿಸಿ ಲಿಂಗಪೂಜೆಯಲ್ಲಿ ಕಾಲಕಳೆದರು. ಅವರ ಪ್ರಾಣದೊಳಗೆ ಹರನಾಣೆಯಡಗಿದ್ದರೆ ಆ ಹರನಾಣೆಯಲ್ಲಿ ಅವರ ಯೌವನ ಅಡಗಿತ್ತು. ಅವರು ಶಿವನಾಣೆಯನ್ನು ಪಾಲಿಸುವ ಕ್ರಮ ಜಪತಪ ಸ್ವರ್ಗಗಳನ್ನು ಮೀರಿಸಿತ್ತು. ಹೀಗಿರು ವಾಗ ಆಣೆ ಪಕ್ವಗೊಂಡಂತೆ ಅವರಿಗೆ ಮುಪ್ಪು ಬಂದಿತು. ಆಗ ಅವರ ಚರ್ಮದ ಸುಕ್ಕುಗಳು ಶಿವಭಕ್ತಿ ಸೋಪಾನಗಳಂತಿದ್ದವು. ಶಿವನಲ್ಲದೆ ಯಾರು ಇಲ್ಲವೆಂಬುದನ್ನು ತಿಳಿಸುವಂತೆ ಅವರ ತಲೆ ನಡುಗುತ್ತಿತ್ತು. ಭವಿಗಳನ್ನು ನೋಡಬಾರದೆಂಬ ಅಪೇಕ್ಷೆ ಯಿಂದ ಅವರ ಕಣ್ಣುಗಳು ಮಂಜಾದವು. ಸತ್ಯವೇ ತಲೆಗೇರಿದಂತೆ ನರೆ ಅಡಗಿತ್ತು, ಹಲವು ಕರ್ಮಗಳಿಗೆ ಅಡಿಯಿಡಬಾರದೆಂದು ಅವರ ನಡಿಗೆ ತಡವರಿಸಿತು. ಮಾಯೆ ಯನ್ನು ಕೇರುವಂತೆ ಅವರ ಕೈಗಳು ನಡಗುತ್ತಿದ್ದವು. ಅವರಿಗೀಗ ತೊಂಭತ್ತುವರ್ಷ.

ಶಿವನು ತಿರುನೀಲಕಂಠನ ದಂಪತಿಗಳ ಮನವನೊರೆದು ನೋಡಲು ಇಚ್ಛಿಸಿ ಭಿಕ್ಷುಕ ವೇಷವನ್ನಳವಡಿಸಿಕೊಂಡು ಪೊನ್ನಾಂಬಲ ಪುರದತ್ತ ಹೊರಟನು, ತಿರು ನೀಲಕಂಠನ ಮನೆಯ ಮುಂದೆ ಬಂದು ಭಿಕ್ಷುಕವೇಷದ ಶಿವನು ದನಿದೋರಲು ಅದನ್ನು ಕೇಳಿ ಅವನಿಗೆ ಪರಮ ಸಂತಸವಾಯಿತು. ಧಾವಿಸಿ ಹೊರಗೋಡಿ ಬಂದು ಭಿಕ್ಷುಕ ಭಕ್ತನನ್ನು ಕಂಡು ಪ್ರಣಾಮಮಾಡಿ ಪಾದಗಳನ್ನು ಸುಖಾಶ್ರುಗಳಿಂದ ತೊಳೆದನು. ತನ್ನ ಮನೆಗೆ ಸುರಧೇನು ಕಲ್ಪತರುಗಳು ಬಂದುದಕ್ಕಿಂತಲೂ ನೂರ್ಮಡಿ ಸಂತೋಷ ತಿರುನೀಲಕಂಠನಿಗಾಯಿತು. ಒಳಗೆ ಕರೆದೊಯ್ದು 'ದೇವಾ ನನಗೆ ಯಾವ ಕಾರ್ಯಕ್ಕಾಗಿ ಅಪ್ಪಣೆಕೊಡುವಿರಿ ?' ಎಂದು ಕೇಳಿದಾಗ ಭಿಕ್ಷುಕ ಶಿವನು 'ನಾವು ಭಕ್ತರಿಂದ ಏನನ್ನೂ ಅಪೇಕ್ಷಿಸುವರಲ್ಲ. ನೀನು ನನ್ನ ಈ ಪಾತ್ರೆಯನ್ನು ಜೋಪಾನ ದಿಂದ ಇಟ್ಟುಕೊಂಡು ನಾನು ಕೇಳಿದಾಗ ಮರಳಿಕೊಡಬೇಕು.' ಎಂದು ಹೇಳಿ ಒಂದು ಪಾತ್ರೆಯನ್ನು ನೀಡಿದನು. 'ಇದು ಸಾಮಾನ್ಯ ಪಾತ್ರೆಯಲ್ಲ. ನಮ್ಮ ಭಕ್ತರು ಕೊಟ್ಟ ಕಾಣಿಕೆ. ಇದು ಬೇಡಿದುದನ್ನೀಯುವ ಮಹಾ ಸಿದ್ಧಿಯನ್ನುಳ್ಳದು.

ೀಡದುದನ್ನೀಯುವ ವಿಚಿತ್ರ ಶಕ್ತಿ ಇದಕ್ಕಿದೆ ಆದ್ದರಿಂದ ಇದನ್ನು ಕಾಳಜಿಯಿಂದ ಸಂರಕ್ಷಿಸಬೇಕು' ಎಂದು ಎಚ್ಚರಿಕೆಯ ಮಾತುಗಳನ್ನು ಹೇಳಿ ಹೋದನು.

ತಿರುನೀಲಕಂಠನು ಆ ಪಾತ್ರೆಯನ್ನು ಜಾಗರೂಕತೆಯಿಂದ ಒಂದು ಪೆಟ್ಟಿಗೆ ಯೊಳಗಿಟ್ಟು ಬೀಗ ಜಡಿದನು. ಆ ಪೆಟ್ಟಿಗೆಯನ್ನು ಗಂಡ ಹೆಂಡತಿ ತಮ್ಮ ಮಧ್ಯದಲ್ಲಿ ಟ್ಟುಕೊಂಡು ಸದಾ ಎಚ್ಚರಿಕೆಯಿಂದಿದ್ದು ಕಾಪಾಡಿದರು. ಮರುದಿನ ಬೆಳಗಾಗುವಷ್ಟ ಲ್ಲಿ ಆ ಭಿಕ್ಷುಕನು ತನ್ನ ಪಾತ್ರೆಯನ್ನು ನೀಡಬೇಕೆಂದು ಅವಸರಮಾಡತೊಡಗಿದನು. ದಂಪತಿಗಳು ಮನದೊಳಗೆ ಅಂಜುತ್ತ ತಡಬಡಗೊಂಡು ಪೆಟ್ಟಿಗೆಯ ಮುಚ್ಚಳ ತೆರೆದರು. ಪೆಟ್ಟಿಗೆಯಲ್ಲಿ ಪಾತ್ರೆ ಇರಲಿಲ್ಲ. ತಿರುನೀಲಕಂಠನು ಆಶ್ಚರ್ಯ ಮತ್ತು ಆಘಾತದಿಂದ ಮೂರ್ಛೆಹೋಗಿ ಸಾವರಿಸಿಕೊಂಡು ಮೇಲೆದ್ದನು. ಭೀತಿಯಿಂದ ನಡುಗುತ್ತ ಬೆವರುತ್ತ ನುಡಿಯಲರಿಯದೆ ಮೌನವಾಗಿ ತಲೆ ತಗ್ಗಿಸಿ ನಿಂತನು. ಆಗ ಅವನಿಗೆ ತನ್ನನ್ನು ನೆಲವು ಬಾಯಿ ಬಿಟ್ಟು ನುಂಗಬಾರದೇ ಎಂದೆನಿಸಿತು ಇತ್ತ ಭಿಕ್ಷುಕನ ಆರ್ಭಟ ಹೆಚ್ಚಾಯಿತು "ನಿಮ್ಮಂಥ ಮೋಸಗಾರರು ಯಾರಿದ್ದಾರೆ? ಖಾಲಿ ಪೆಟ್ಟಿಗೆ ತೋರಿಸಿ ನನ್ನಗಂಟಲು ಕೊಯ್ದಿರಿ. ಅಯ್ಯೋ ಒಬ್ಬರೂ ಸಾಕ್ಷಿ ಇಲ್ಲವಲ್ಲಾ! ಏನು ಮಾಡಲಿ?" ಎಂದು ಕೂಗಾಡುತ್ತಾ ಪೆಟ್ಟಿಗೆಯನ್ನೊಮ್ಮೆ ತಿರುನೀಲಕಂಠನ ಮುಖವನ್ನೊಮ್ಮೆ ನೋಡುತ್ತ ಬೈಯ್ಯ ತೊಡಗಿದನು "ಪಾತ್ರೆಯನ್ನು ನೀನೇ ಇಟ್ಟು ಕೊಂಡಿರುವಿ ಇಲ್ಲವಾದರೆ ಅದನ್ನು ಪೆಟ್ಟಿಗೆ ನುಂಗಿತೇ? ಅದು ತನ್ನಷ್ಟಕ್ಕೆ ತಾನೇ ಕರಗಿಹೋಯಿತೇ?" ಎನ್ನುತ್ತ ಹುಸಿಕೋಪವನ್ನು ನಟಿಸುತ್ತ ಹಲ್ಲುಕಡಿದು ಅಂಜಿಸುವ ದನಿಯಲ್ಲಿ ಶಿವಘೋ ಎಂದು ಕೂಗಾಡತೊಡಗಿದನು. ಇದನ್ನು ಕೇಳಿ ಜನಸೇರಿದರು. ತಿರುನೀಲಕಂಠನ ಮೇಲಿನ ಆಪಾದನೆಕಂಡು ಅವರಿಗೆಲ್ಲ ಆಶ್ಚರ್ಯ ಮತ್ತು ಮರುಕ. ಭಿಕ್ಷುಕನು "ನೀವಿಲ್ಲಿ ಒಪ್ಪಿಕೊಳ್ಳುವುದಿಲ್ಲ. ಪೊನ್ನಾಂಬಲ ದೇವಾಲಯಕ್ಕೆ ಹೋಗೋಣ ಅಲ್ಲಿ ಹಿರಿಯ ಮೂವಾಯಿಲರು (ಪಂಚರು) ನ್ಯಾಯ ನಿರ್ಣಯಮಾಡಲಿ" ಎಂದು ಹೇಳಿ ಆ ದಂಪತಿಗಳನ್ನು ದೇವಾಲಯಕ್ಕೆಹೊರಡಿಸಿದನು. ತಿರುನೀಲಕಂಠನು ಅಯ್ಯೋ ಸದಾಶಿವನು ಈ ಕಾಲಕ್ಕೆ ಇದೇನನ್ನು ಮಾಡಿದನೆಂದು ಚಿಂತಿಸುತ್ತ ಉಪಾಯಗಾಣದೆ ಹೆಂಡತಿಯೊಂದಿಗೆ ಮುಖ ತಗ್ಗಿಸಿಕೊಂಡು ನಡೆದು ಬರುತ್ತಿದ್ದನು.

ಪೊನ್ನಾಂಬಲ ದೇವಾಲಯದಲ್ಲಿ ಮೂವಾಯಿಲರ ಸಭೆ ಸೇರಿತು. ಭಕ್ತರ ನೆರವಿಯ ಮುಂದೆ ತಿರುನೀಲಕಂಠ ದಂಪತಿಗಳು ಕಿಂಕರತೆಯಿಂದ ಕುಗ್ಗಿ ತಲೆಬಾಗಿ ನಿಂತರು. ಮೂವಾಯಿಲರು ಇದೆಲ್ಲ ಏನು ಎಂದು ಕೇಳಿದ್ದಕ್ಕೆ ತಿರುನೀಲಕಂಠ ಮುತ್ತೈದೆ ಏನು ಹೇಳಲೂ ತೋಚದೆ ಮೌನದಿಂದಿದ್ದರು. ಆಗ ಭಿಕ್ಷುಕನು ಅವರನ್ನೇನು ಕೇಳುವಿರಿ? ನಾನು ಹೇಳುತ್ತೇನೆ ಕೇಳಿರಿ. ನಮ್ಮ ಭಕ್ತರು ಕೊಟ್ಟ

ಪಾತ್ರೆಯನ್ನು ಇವರಲ್ಲಿ ಜೋಪಾನವಾಗಿಟ್ಟುಕೊಳ್ಳಲು ಕೊಟ್ಟರೆ ಇವರು ಆ ಪಾತ್ರೆಯನ್ನು ನುಂಗಿಬಿಟ್ಟಿದ್ದಾರೆ ಇಲ್ಲಿ ಈ ಪುರದೊಳಗೆ ಸಾಧುವ್ಯಕ್ತಿಗಳೆಂದು ಮಾನ್ಯತೆ ಪಡೆದಿರುವ ಇವರು ಇಂಥ ಕೆಲಸ ಮಾಡಬಹುದೆ ? ಇದು ಹೊಸತನದ ಕಳ್ಳತನ!" ಎಂದು ಆರ್ಭಟಿಸಿದನು. ಈ ಮಾತು ಕೇಳಿ ಇಡೀ ಸಭೆ ಠಕ್ಕನಾದವಿದಂತೆ ನೋಡ ತೊಡಗಿತು. ತಿರುನೀಲಕಂಠನು ಮನದೊಳಗೆ ಸಾಯುತ್ತ ಹುಟ್ಟುತ್ತ ತನಗೆ ಇದೆಂಥ ಕೇಡುತನವೊದಗಿತೆಂದು ಮರುಗುತ್ತ ನಿಂತಿದ್ದನು. ಸಭೆಯು ಆದಂಪತಿಗಳನ್ನು "ನೀವೇಕೆ ಇವನ ಪಾತ್ರೆಯೇಕೆ ? ಇವನೊಡ್ಡಿದ ತೊಡಕಿನಿಂದ ನೀವೇಕೆ ಸಣ್ಣಗಾಗುವಿರಿ ? ನಡೆದಿರುವ ವಿಷಯವಾದರೂ ಏನು ?" ಎಂದು ಪ್ರಶ್ನಿಸಿತು. ತಿರುನೀಲಕಂಠನು ಕಣ್ಣಲ್ಲಿ ನೀರು ತುಂಬಿಕೊಂಡು "ನಿಮಗೆಲ್ಲ ಗೊತ್ತಿರುವಂತೆ ಪುಸಿವವರು ನಾವಲ್ಲ. ಪಾತ್ರೆಯ ತೊಡಕಿನಲ್ಲಿ ಸಿಕ್ಕಿಬಿದ್ದೆವು ನಮಗಿನ್ನು ಬೇರೆ ಗತಿಯಿಲ್ಲ. ಭಿಕ್ಷುಕನು ನೀಡುವ ಶಿಕ್ಷೆಗೆ ನಾವು ಸಿದ್ಧರಾಗಿದ್ದೇವೆ. ನಿಮಗೆಲ್ಲ ಏಕೆ ತೊಂದರೆ ? ನೀವಿನ್ನು ಮನೆಗೆ ಹೊರಡಿರಿ" ಎಂದು ಭಿನ್ನವಿಸಿಕೊಂಡನು. ಈ ಮಾತುಕೇಳಿ ಸಭೆ ಮಮ್ಮಲ ಮರುಗಿತ್ತು. ಕೊನೆಗೆ ಪ್ರತಿಯೊಬ್ಬರು ತಲಾ ಒಂದೊಂದು ಹೊನ್ನಿನ ನಾಣ್ಯ ಸೇರಿಸಿ ಭಿಕ್ಷುಕನಿಗೆ ಹೊನ್ನಿನ ಪಾತ್ರೆ ಕೊಡಿಸಲು ನಿರ್ಧರಿಸಿದರು. ಇದನ್ನು ಭಿಕ್ಷುಕ ಒಪ್ಪಲಿಲ್ಲ. ಧಗಿಭುಗಿಲೆನುತ್ತ ಕುಣಿದಾಡುತ್ತ "ನನ್ನ ಪಾತ್ರೆ ಸಾಮಾನ್ಯವಾದದ್ದೇ! ಅದು ನನಗೆ ಒಡಲಪ್ಪದು ಆಯುವಪ್ಪದು ಶಿವನಿಧಿಯಪ್ಪದು. ನೆನೆಯದಿದ್ದುದನು ನೆನೆದದ್ದನ್ನು ನೀಡುವ ಆ ಪಾತ್ರೆಯೇ ನನಗೆ ಬೇಕು ಅದಕ್ಕೆ ಹೊನ್ನುಗಿನ್ನು ಸಮಾನವೇ ?" ಎಂದು ಹೇಳಿ ಸಿಟ್ಟಿನ ಭರದಲ್ಲಿ ತಿರುನೀಲಕಂಠನನ್ನು ಹೊಡೆಯಲು ಒದೆಯಲು ಮುಂದಾಗುತ್ತಾನೆ, ದಂಪತಿಗಳನ್ನು ಕೊಲ್ಲುವಂತೆ ಘೂರ್ಮಿ ಕೆಕ್ಕಳಿಸಿ ನೋಡುತ್ತ ಅಯ್ಯೋ ಪಾತ್ರೆ ಪಾತ್ರೆ ಎನ್ನುತ್ತ ಅರಚತೊಡಗಿದನು. ಸಭೆಗೆ ದಿಕ್ಕು ತೋಚದಾಯಿತು. ಮೂವಾಯಿಲರು ಇದನ್ನು ಹರನೇ ಬಲ್ಲ. ಇದು ನಮ್ಮ ವಶವಲ್ಲ ಎಂದು ನಿಸ್ಸಹಾಯಕರಾಗಿ ಕುಳಿತರು

ಭಿಕ್ಷುಕನು "ಹೋಗಲಿ ನಾನೇ ಸೋಲುತ್ತೇನೆ. ದೈವ ಪರೀಕ್ಷೆಯಾಗಲಿ ತಿರುನೀಲಕಂಠನು ತನ್ನ ಹೆಂಡತಿಯ ಕೈಹಿಡಿದುಕೊಂಡು ಈ ಕೊಂಡದೊಳಗೆ ಮುಳುಗಿ ಎದ್ದು ತಾನು ತಪ್ಪಿತಸ್ಥನಲ್ಲವೆಂದು ಸಾರಿಹೇಳಲಿ'' ಎಂದನು. ಸಮಸ್ಯೆಗೆ ಅಂತೂ ಒಂದು ಉಪಾಯ ಹೊಳೆಯಿತಲ್ಲ ಎಂದು ಸಭೆ ಸಂತಸಪಟ್ಟಿತು. ಆದರೆ ಭಿಕ್ಷುಕನ ಮಾತು ಕೇಳಿ ತಿರುನೀಲಕಂಠನಿಗೆ ಅಲಗಿನಿಂದ ಇರಿದಂತಾಯಿತು ಇವನು ತನ್ನ ವ್ರತವನ್ನು ಬಯಲಿಗಿಟ್ಟನೆಂದು ಕೊರಗಿದನು. ''ಹೆಂಡತಿಯ ಕೈಯನ್ನು ಹಿಡಿಬಾರದು, ಹಿಡಿಯದಿರಬಾರದು, ಶಿವನಾಣೆಯನ್ನು ಮೀರಿದರೆ ಭಕ್ತಿಡಂಬನೆನಿಸಿಕೊಳ್ಳುವೆ. ಭಿಕ್ಷುಕನ ಮಾತು ನಡೆಸದಿದ್ದರೆ ಕಳ್ಳನೆನಿಸಿಕೊಳ್ಳುವೆ. ಶಿವನಾಣೆಯ ರಹಸ್ಯವನ್ನು ಹೇಗೆ ಬಹಿರಂಗಗೊಳಿಸುವುದು ? ಇದ್ದಕ್ಕಿದ್ದಂತೆ ನಾನು ಅದೃಶ್ಯನಾಗಬಾರದೆ ? ಸುಟ್ಟು ಭಸ್ಮವಾಗಬಾರದೆ ? ಶಿವನು ನನ್ನನು ಇಷ್ಟು ದಿನ ಏಕೆ ಬದುಕಿಸಿದನು ?'' ಎಂದು ಮುಂತಾಗಿ ಚಿಂತಿಸಿದನು. ತನ್ನ ದುಸ್ಥಿತಿಗಾಗಿ ಕುದಿದು ಕುಸಿದನು. ಕೊನೆಗೆ ಕಷ್ಟಪಟ್ಟು ''ಏನಾದರೂ ಸರಿ. ನನ್ನ ಹೆಂಡತಿಯ ಕೈ ಹಿಡಿಯ

ಲಾರೆ'' ನೆಂದು ನುಡಿದನು. ಆ ಮಾತು ಕೇಳಿ ಸಭೆ ದಿಗಿಲುಗೊಂಡಿತು. ಭಿಕ್ಷುಕನು ''ಸಭಾಸದರೇ, ನೀವೇ ನೋಡಿರಿ. ಇವರೇ ನನ್ನ ಪಾತ್ರೆ ನುಂಗಿದ್ದಾರೆ. ಗಂಡ ಹೆಂಡಿರಾಗಿ ಒಬ್ಬರೊಬ್ಬರ ಕೈ ಹಿಡಿಯಲು ಹಿಂದೆ ಮುಂದೆ ನೋಡುತ್ತಿದ್ದಾರೆ. ಅಂದ ಮೇಲೆ ನಿಶ್ಚಿತವಾಗಿ ಇವರೇ ಕಳ್ಳರು. ನೀವೆಲ್ಲ ಸುಮ್ಮನಿರಿ. ಇವರಿಂದಲೇ ಪಾತ್ರೆ ಪಡೆಯುತ್ತೇನೆ. ಇವರದು ಕವಿಲೆಯಾಕಾರದ ಹುಲಿಯ ಚರಿತೆಯಾಗಿದೆ. ಇವರ ನಡವಳಿಕೆ ಲೋಕಕ್ಕೆ ಹೊಸದೆನಿಸಿದೆ." ಎಂದು ಕೂಗಾಡುತ್ತಾ ಕಟರೆ ಮಾತು ಗಳನ್ನಾಡುತ್ತಾ, ಬೈಯುತ್ತಾ ಕುಣಿದಾಡತೊಡಗಿದನು. ಕೋಪಗೊಂಡು ತಿರು ನೀಲಕಂಠನನ್ನು ಹೊಡೆದನು. ಒದ್ದನು. ಬೈಗುಳ ಹೊಡೆತ ಒದೆತಗಳನ್ನು ತಿರು-ನೀಲಕಂಠನು ಶಿವಪ್ರಸಾದವೆಂದು ಸ್ವೀಕರಿಸಿದನು. ಭಿಕ್ಷುಕನು ಬೈದಂತೆಲ್ಲ ದೇವಾ ಕರುಣಿಸುವುದೆಂದು ಕಿವಿಕೊಡುವನು. ಒದೆಯಲು ಬಂದಾಗ ಒಲವಿನಿಂದ ಮೈಯೊ-ಡ್ಡುವನು. ಬಡಿದಾಗ ಸಂತೋಷದಿಂದ ಪುಳಕಗೊಳ್ಳುವನು. ಇದನ್ನು ಗಮನಿಸಿದ ನೆರೆದ ಭಕ್ತರು "ಇದು ಈಶ್ವರನ ಮಾಯೆ. ನಮಗಿದು ಅರಿದು. ಈ ತೊಡಕು ಬಿಡಿಸುವವರಾರೂ ಇಲ್ಲ" ಎನ್ನುತ್ತ ಎದ್ದು ಹೊರಡಲನುವಾದರು.

ಆಗ ಮಾಯಾವಿ ಭಿಕ್ಷುಕನು ಮತ್ತೊಂದು ಉಪಾಯ ಸೂಚಿಸಿದನು. ಹಿಂದಿನ ಮಾತುಗಳೇಕೆ ? ಕೈಹಿಡಿಯೆವು ಮೈಸೋಂಕೆವು ಎಂಬ ಅವರ ಮಾತು ಅವರಿಗಿರಲಿ. ಕೊನೆಗೆ ಅವರು ಈ ಲಾತಕೋಲಿನ ಎರಡು ತುದಿಗಳನ್ನು ಹಿಡಿದುಕೊಂಡು ಕೊಂಡದಲ್ಲಿ ಮುಳುಗಿ ಏಳಲಿ" ಎಂದನು. ತಿರುನೀಲಕಂಠ ಇದಕ್ಕೆ ಸಂತೋಷ ದಿಂದ ಒಪ್ಪಿಗೆ ನೀಡಿದ. ಗಂಡ-ಹೆಂಡತಿ ಶಿವನನ್ನು ಸ್ಮರಿಸುತ್ತ ಆ ಲಾತಕೋಲಿನ ಒಂದೊಂದು ತುದಿ ಹಿಡಿದುಕೊಂಡು ''ಇವರು ನಮ್ಮಲ್ಲಿ ಪಾತ್ರೆ ಇಟ್ಟದ್ದು ನಿಜ. ನಾವದನ್ನು ತೆಗೆದುಕೊಂಡಿಲ್ಲ'' ಎಂದು ಘೋಷಿಸುತ್ತ ಮುಪ್ಪನ್ನು ತೊಳೆಯಲು ಜಲದೊಳಗೆ ಇಳಿದರೋ ಎಂಬಂತೆ ಕೊಂಡದೊಳಗೆ ಥಳಲನೆ ಮುಳುಗಿ ಮೇಲೆ-ದ್ದರು. ಸಭೆ ಕೌತುಕದಿಂದ ನೋಡುತ್ತಿರಲು ಕೊಂಡದಿಂದ ಮೇಲೆದ್ದ ದಂಪತಿ ಗಳು ಮೊದಲಿನ ಹದಿನಾರರ ಹರೆಯ ಪಡೆದಿದ್ದರು. ಇತ್ತ ಕಡೆ ಜಗಳದ ಗುರುವು (ಭಿಕ್ಷುಕನು) ತನ್ನ ಕಪಟ ವೇಷ ಕಳಚಿ ನಿಜರೂಪದಲ್ಲಿ ಶಿವಾಲಯದ ಮಂಟಪ ದಲ್ಲಿ ಹೊಳೆಯುತ್ತಿದ್ದನು. ಜಡೆ ಚಂದ್ರಕಳೆ ಹಣೆಗಣ್ಣು ನಾಗಾಭರಣಗಳಿಂದೊ ಡಗೂಡಿ ಶೋಭಿಸುತ್ತಿದ್ದ ಪರಶಿವನನ್ನು ಕಂಡು ತಿರುನೀಲಕಂಠನು ಆತ್ಮಾನಂದ ದಿಂದ ಓಡಿಬಂದು ಪಾದಗಳಲ್ಲಿ ಬಿದ್ದನು. ''ದೇವಾ ನನ್ನನ್ನು ಪರೀಕ್ಷಿಸಲು ಇಷ್ಟೊಂದು ಕಷ್ಟಪಟ್ಟೆಯಾ ? " ಎಂದು ಹಲುಬಿದನು. ಶಿವನು ದಂಪತಿಗಳನ್ನು ಪ್ರೀತಿಯಿಂದ ಆಶೀರ್ವದಿಸುತ್ತಿದ್ದಾಗ ದೇವತೆಗಳು ಹೂಮಳೆಗರೆದರು. ದೇವಲೋ ಕದ ವಿಮಾನಗಳು ಬಂದು ಸೇರಿದವು ಶಿವನು ನಂದಿಯ ಮುಂದೆ ''ನನ್ನ ಭಕ್ತರು ಏನು ಮಾಡಲಾರರು ? ಹದಿನಾರನೆಯ ವರ್ಷದಲ್ಲಿಟ್ಟ ಆಣೆಯನ್ನು ಇಲ್ಲಿಯವರೆಗೆ ಇವರು ಮೀರಲಿಲ್ಲ. ನಾನೊಡ್ಡಿದ ಕಠಿಣ ಪರೀಕ್ಷೆಯಲ್ಲಿ ಇವರು ಸೋಲಲಿಲ್ಲ. ಈ ಲೋಕದಲ್ಲಿ ಇವರ ಸಮಾನರಾದವರು ಯಾರೂ ಇಲ್ಲ." ಎಂದು ಆ ದಂಪತಿಗಳನ್ನು ಹೊಗಳಿದನು. ಅವರನ್ನು ಶಿವನು ತನುವೆರಸಿ ಕೈಲಾಸಕ್ಕೆ ಕರೆದೊಯ್ದು ಗಣ ಪದವಿಯೊಳಗಿರಿಸಿದನು.

(ಮುಂದುವರಿಯುತ್ತದೆ.)

# ಶ್ರದ್ಧಾಂಜಲಿ

## ದಾಸೇನಹಳ್ಳಿ ಶಾಸ್ತ್ರಿಗಳು

ವೇದ ವಿದ್ವಾನ್ ಶ್ರೀ ಸಿದ್ಧಲಿಂಗಶಾಸ್ತ್ರಿಗಳು ಶ್ರೀ ಸಿದ್ಧಗಂಗಾಮಠದಲ್ಲಿ ಪ್ರಧಾನ ಪುರೋಹಿತರಾಗಿದ್ದು, ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ದೇವಾಲಯದಲ್ಲಿ ಆಗಮಿಕ ಕಾರ್ಯ ಕ್ರಮಗಳನ್ನು ನಡೆಸಿಕೊಂಡು ಬರುತ್ತಿದ್ದರು. ಶ್ರೀ ಶಾಸ್ತ್ರಿಗಳು ದಿನಾಂಕ 11-4-94ರಂದು ಶಿವೈಕ್ಯರಾದುದಕ್ಕೆ "ಸಿದ್ಧಗಂಗಾ" ಅತೀವಶೋಕಕ್ಕೆ ಒಳಗಾಗಿದೆ. ಶ್ರೀ ಶಾಸ್ತ್ರಿಗಳ ನಿಧನದಿಂದ ತುಂಬಲಾರದ ನಷ್ಟ ಉಂಟಾಗಿದೆ.

ಶಾಸ್ತ್ರಿಗಳು ವೇದ ವಿದ್ಯಾಪಾರಂಗತರಾಗಿದ್ದು ಅನೇಕ ಶಿಷ್ಯರುಗಳಿಗೆ ಮಾರ್ಗ ದರ್ಶನ ಮಾಡುತ್ತ ಬಂದಿದ್ದರು. ಶಾಸ್ತ್ರಿಗಳ ಅಗಲಿಕೆಯಿಂದ ಹಳೆಯ ತಲೆಮಾರಿನ ಕೊಂಡಿ ಕಳಚಿದಂತಾಗಿದೆ. ಶ್ರೀ ಶಾಸ್ತ್ರಿಗಳ ಕುಟುಂಬಕ್ಕೆ ಅವರ ಅಗಲಿಕೆಗೆ ನೋವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಪ್ರಮಥರು ನೀಡಲೆಂದು 'ಸಿದ್ಧಗಂಗಾ' ಹಾರೈಸುತ್ತಾ, ಅವರ ಆತ್ಮಕ್ಕೆ ಶಾಂತಿಯನ್ನು ಕೋರುತ್ತದೆ.

---

## ಸಚಿವ ಟಿ. ಎಂ. ಮಂಜುನಾಥ್

ಶ್ರೀ ಸಿದ್ಧಗಂಗಾಮಠದ ಭಕ್ತರು, ಅಭಿಮಾನಿಗಳೂ ಆಗಿದ್ದ ರಾಜ್ಯದ ಸಕ್ಕರೆಖಾತೆಯ ಸಚಿವರಾಗಿದ್ದ ಶ್ರೀ ಟಿ.ಎಂ. ಮಂಜುನಾಥ್‌ರವರು 29-5-94 ಶಿವೈಕ್ಯರಾದರು. ಅವರ ನಿಧನದಿಂದ ನಾಡಿಗೂ ಹಾಗೂ ಶ್ರೀಮಠಕ್ಕೂ ಅಪಾರ ನಷ್ಟವಾಗಿದೆ. ಶ್ರೀಯುತರು ಜನಪ್ರಿಯ ನಾಯಕರಾಗಿದ್ದರು. ತುಮಕೂರು ಜಿಲ್ಲೆಯ ಅಭಿವೃದ್ಧಿಗೆ ಕಾರಣರಾಗಿದ್ದರು "ಮಂಜಣ್ಣ" ಎಂಬ ಹೆಸರಿನಿಂದಲೇ ಆಬಾಲ ವೃದ್ಧರಾದಿಯಾಗಿ ಎಲ್ಲರಲ್ಲಿ ಸ್ನೇಹ ಶೀಲರಾಗಿದ್ದರು. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಅಭಿವೃದ್ಧಿಗೆ ಕ್ರಿಯಾತ್ಮಕವಾಗಿ ಸಹಕರಿಸುತ್ತ ಬಂದಿದ್ದುದನ್ನು ಇಲ್ಲಿ "ಸಿದ್ಧಗಂಗಾ" ಸ್ಮರಿಸುತ್ತದೆ. ಶ್ರೀಯುತರನ್ನು ಅಗಲಿರುವ ಕುಟುಂಬ ವರ್ಗದವರ ದುಃಖವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಪ್ರಮಥರು ನೀಡಲೆಂದು ಪ್ರಾರ್ಥಿಸುತ್ತಾ ಮೃತರ ಆತ್ಮಕ್ಕೆ "ಸಿದ್ಧಗಂಗಾ" ಶಾಂತಿಯನ್ನು ಕೋರುತ್ತದೆ.

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತವೆ.

**ಹೋಟೆಲ್**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ
**8597, 2373, 2577**







**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು-1
ದೂರವಾಣಿ : **8077**



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : **2677**

**ಶ್ರೀ ವಿ. ಮಹದೇವಪ್ಪ**
ಮ್ಯಾನೇಜಿಂಗ್ ಪಾರ್ಟ್ನರ್

**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು-1
ದೂರವಾಣಿ : **2077**

"SIDDAGANGA" MONTHLY Reg. No. KRNQ-9.

ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288 }

ಕೇಂದ್ರ ಕಛೇರಿ : { 72866 / 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಪಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನಸಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ :

| | |
|---|---|
| ಸದಸ್ಯರಿಂದ | ರೂ. 7.08 ಲಕ್ಷ |
| ಸರ್ಕಾರದಿಂದ | ರೂ. 13-42 ಲಕ್ಷ |
| ಒಟ್ಟು | ರೂ. 20.50 ಲಕ್ಷ |

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಂಧಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು